# ಉದಯನ ಕಥೆ

ಎಲ್. ಗುಂಡಪ್ಪ





ಮಾರಾಟಗಾರರು: ಎಸ್. ಎಸ್. ಎನ್. ಬುಕ್ ಡಿಪೋ, ಬೆಂಗಳೂರು-೨

# ಉದಯನ ಕಥೆ

('ಪೆರುಙ್ಗಕ್ಕೈ' ಎಂಬ ಪುರಾತನ ತಮಿಳು ಮಹಾಕಾವ್ಯದ ಕಥೆಯ ಸರಳಾನುವಾದ)

ಜ್ಯೋತಿ ಗ್ರಂಥಮಾಲೆ-೨





ಲೇಖಕರು ಮತ್ತು ಪ್ರಕಾಶಕರು:

**ಎಲ್. ಗುಂಡಪ್ಪ ಎಂ. ಎ.,**

ನಂ. ೭೬, ೪ನೆಯ ಬೀದಿ, ನರಸಿಂಹರಾಜ ಕಾಲೋನಿ.

ಬೆಂಗಳೂರು-೪.

ಮೊದಲನೆಯ ಮುದ್ರಣ ೧೯೫೬
ಎರಡನೆಯ ಮುದ್ರಣ ೧೯೬೦







ಬೆಲೆ : ರೂ. ೦-೯೫

ಮುದ್ರಣಕಾರರು:
ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ,
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ,
ಬೆಂಗಳೂರು-೧೮

## ಅ ರಿ ಕೆ

ಉದಯನ ಕಥೆಯನ್ನು ೧೯೬೦-೬೧ನೆಯ ವರ್ಷಕ್ಕೆ ಹೈಸ್ಕೂಲು ೮ನೆಯ ತರಗತಿಗೆ ಪಠ್ಯ ಪುಸ್ತಕವಾಗಿ ಗೊತ್ತುಮಾಡಿರುವುದರಿಂದ ಈ ಎರಡನೆಯ ಮುದ್ರಣ ಹೊರಬರುತ್ತಿದೆ. ಇದು ಮೊದಲಿನದರ ಪುನರ್ಮುದ್ರಣ; ಇದರಲ್ಲಿ ಯಾವ ಮಾರ್ಪಾಟನ್ನೂ ಮಾಡಿಲ್ಲ.

ಜ್ಯೋತಿ ಗ್ರಂಥಮಾಲೆಯ ಎರಡನೆಯ ಪುಸ್ತಕವಾಗಿ ಇದು ಪ್ರಕಟವಾಗುತ್ತಿದೆ. ಈ ಗ್ರಂಥಮಾಲೆಯಲ್ಲಿ ಸಂಸ್ಕೃತ ಸಾಹಿತ್ಯದಿಂದಲೂ, ಕನ್ನಡದ ಪುರಾತನ ಸಾಹಿತ್ಯದಿಂದಲೂ, ತಮಿಳು ಮೊದಲಾದ ಸೋದರ ಸಾಹಿತ್ಯಗಳಿಂದಲೂ ನಮ್ಮ ಜನರ ಮನಸ್ಸಂತೋಷಕ್ಕೂ ಬುದ್ಧಿವಿಕಾಸಕ್ಕೂ ಸಾಧಕವಾದ ವಿಷಯಗಳನ್ನು ಸಂಗ್ರಹಿಸಿ ಪ್ರಕಟಿಸಬೇಕೆಂಬ ಉದ್ದೇಶವಿದೆ; ಸಾಧ್ಯವಾದ ಮಟ್ಟಿಗೂ ಸೋದರ ಸಾಹಿತ್ಯ ಕೃತಿಗಳ ಪರಿಚಯಮಾಡಿಕೊಡಬೇಕೆಂಬ ಅಪೇಕ್ಷೆಯಿದೆ.

ಈ ಅಪೇಕ್ಷೆ ಈಡೇರುವಂತಾಗುವುದು ಬಹು ಮಟ್ಟಿಗೆ ಜನತೆಯ ಬೆಂಬಲವನ್ನವಲಂಬಿಸಿದೆ. ಆ ಬೆಂಬಲ ಯಥೇಚ್ಛವಾಗಿ ದೊರೆಯುವುದೆಂದು ನಂಬಿದ್ದೇನೆ.

ಬೆಂಗಳೂರು
೪-೬-೧೯೬೦

ಎಲ್. ಗುಂಡಪ್ಪ

---

## ಮೊದಲನೆಯ ಮುದ್ರಣಕ್ಕೆ

ಉದಯನನು ಪುರಾತನ ಭರತಖಂಡದ ಜನಪ್ರಿಯನಾದ ಒಬ್ಬ ರಾಜ. ಅವನು ಬುದ್ಧನ ಸಮಕಾಲಿಕನಂತೆ. ಅವನ ವಿಷಯವಾಗಿ ಅನೇಕ ಕಥೆಗಳು ಬಹು ಕಾಲದವರೆಗೂ ಪ್ರಚಾರದಲ್ಲಿದ್ದವು. ಕವಿ ಕಾಳಿದಾಸನ ಕಾಲದಲ್ಲಿ

ಕೂಡ ಅವಂತಿ ನಾಡಿನ ಹಳ್ಳಿಹಳ್ಳಿಯಲ್ಲಿಯೂ ಉದಯನನ ಕಥೆ ಜನಕ್ಕೆ ಮೆಚ್ಚಾಗಿತ್ತಂತೆ.

ವತ್ಸರಾಜನಾದ ಈ ಉದಯನನ ವಿಷಯವಾಗಿ ಸುಮಾರು ಕ್ರಿಸ್ತಶಕ ಪ್ರಾರಂಭಕಾಲದಲ್ಲಿ 'ಬೃಹತ್ಕಥೆ' ಎಂಬ ಮಹಾಗ್ರಂಥ ಸೃಷ್ಟಿಯಾಯಿತು. ಈ ಬೃಹತ್ಕಥೆ ರಾಮಾಯಣ ಮಹಾಭಾರತಗಳಂತೆಯೇ ಬಹು ಪ್ರಸಿದ್ಧಿ ಪಡೆಯಿತು. ಹಲವು ಕವಿಗಳು ಇದರಿಂದ ಕಥಾವಸ್ತುವನ್ನು ಆಯ್ದುಕೊಂಡು ಕಾವ್ಯ ನಾಟಕಗಳನ್ನು ರಚಿಸಿದರು.

ಮೂಲ ಬೃಹತ್ಕಥೆ 'ಪೈಶಾಚಿ' ಭಾಷೆಯಲ್ಲಿತ್ತಂತೆ. ಆ ಭಾಷೆ ಮೊದಲೇ ಹೆಚ್ಚು ಪ್ರಚಾರದಲ್ಲಿರಲಿಲ್ಲ; ಈಗಂತೂ ಪೂರ್ತಿ ಕಣ್ಮರೆಯಾಗಿ ಹೋಗಿದೆ. ಇಂಥ ಅಪ್ರಸಿದ್ಧ ಭಾಷೆಯಲ್ಲಿ ರಚಿಸಿದ್ದರಿಂದಿರಬಹುದು, ಮೂಲಗ್ರಂಥ ಬಹಳ ಹಿಂದಿನ ಕಾಲದಲ್ಲಿಯೇ ನಷ್ಟವಾಗಿ ಹೋಯಿತು. ಭಾಷೆ ಅಪ್ರಸಿದ್ಧವಾದರೂ ಕಥೆ ಸುಪ್ರಸಿದ್ಧವಾಯಿತು. ಅದರ ಪ್ರತಿನಿಧಿಯಾಗಿ ಸಂಸ್ಕೃತದಲ್ಲಿ ಮೂರು ಗ್ರಂಥಗಳಿವೆ. ಇದೆಲ್ಲ ಇತ್ತೀಚಿಗೆ, ಸುಮಾರು ಕ್ರಿ.ಶ. ೧೦-೧೧ನೆಯ ಶತಮಾನದಲ್ಲಿ ಹುಟ್ಟಿದವು.

ಈ ಸಂಸ್ಕೃತ ಗ್ರಂಥಗಳಲ್ಲಿ 'ಕಥಾಸರಿತ್ಸಾಗರ' ಬಹು ಪ್ರಸಿದ್ಧವಾಗಿದೆ; 'ಅರೆಬಿಯನ್ ನೈಟ್ಸ್' ಕಥೆಯಂತೆಯೇ ಸರ್ವಜನ ಮನೋರಂಜಕವಾಗಿದೆ. ಆ ಕಥೆಯಲ್ಲಿ ಬೃಹತ್ಕಥೆಯ ಪ್ರಭಾವ ಬೇಕಾದಷ್ಟು ಕಂಡು ಬರುತ್ತದೆಯೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಈ ಕಥಾಸರಿತ್ಸಾಗರವನ್ನು ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳವರು "ಕಥಾಮೃತ" ಎಂಬ ಹೆಸರಿನಿಂದ ಕನ್ನಡಿಸಿ ಪ್ರಕಟಿಸಿದ್ದಾರೆ; ಕಥೆಯ ಅಮೃತವನ್ನು ಕನ್ನಡಿಗರಿಗೆ ಎರೆದಿದ್ದಾರೆ.

ತಮಿಳಿನಲ್ಲಿ 'ಪೆರುಙ್ಗತೈ' ಎಂಬ ಒಂದು ಪುರಾತನ ಮಹಾಕಾವ್ಯವಿದೆ. ಇದು 'ಬೃಹತ್ಕಥೆ'ಯ ತಮಿಳು ರೂಪ. ಸಂಸ್ಕೃತ ಗ್ರಂಥಗಳಿಗೂ ಇದಕ್ಕೂ ಕೆಲವು ವ್ಯತ್ಯಾಸಗಳಿವೆ. ಭಾಸಕವಿಯ ನಾಟಕಗಳಿಗೂ ಪೆರುಙ್ಗತೆಯ ಕಥೆಗೂ ಹೆಚ್ಚು ಹೊಂದಿಕೆಯಿದೆ. ಸಂಸ್ಕೃತ ಗ್ರಂಥಗಳಲ್ಲಿ ವಿದ್ಯಾಧರ ಚಕ್ರವರ್ತಿಯಾದ ನರವಾಹನದತ್ತನಿಗೆ ಪ್ರಧಾನಸ್ಥಾನ, ತಮಿಳು ಗ್ರಂಥದಲ್ಲಿ ಅವನ ತಂದೆಯಾದ

ಉದಯನನಿಗೇ ಪ್ರಥಮಸ್ಥಾನ. ಅಲ್ಲಿ ಶೈವ ಸಂಬಂಧವೂ ಇಲ್ಲಿ ಜೈನ ಸಂಬಂಧವೂ ಕಂಡುಬರುತದ್ದೆ.

ಸಾಹಿತ್ಯಾಭ್ಯಾಸಿಗಳಿಗೆ ಉದಯನನ ಕಥೆ ಯಾವ ರೂಪದಿಂದಲೇ ಆದರೂ ಆದರಣೀಯವಾದದ್ದೇ. ತಮಿಳು ಕಥೆಯೂ ಬಹು ಮುದ್ದಾಗಿದೆ. ಅದರ ಪರಿಚಯವೂ ಆವಶ್ಯವೆಂದು ಭಾವಿಸಿ ಆ ಕಥೆಯನ್ನು ಸಂಗ್ರಹಿಸಿ ಕನ್ನಡಿಗರ ಮುಂದಿಟ್ಟಿದ್ದೇನೆ. ೧೦-೧೫ ವರ್ಷದ ವಿದ್ಯಾರ್ಥಿಗಳಿಗೂ ಸಾಮಾನ್ಯ ಓದುಗರಿಗೂ ಒದಗುವಂತೆ ಈ ಸಂಗ್ರಹವನ್ನು ಸಿದ್ಧಪಡಿಸಲಾಗಿದೆ.

ಸೂಸು, ನೆಲೆ, ಮಿಾ ಮೊದಲಾದವು ಬಹು ಉಪಯುಕ್ತವಾದ ಅಚ್ಚ ಕನ್ನಡ ಪದಗಳು. ಹೊರಗಿನ ಸಂಪರ್ಕ ಅಷ್ಟಾಗಿ ಇರದ ಹಳ್ಳಿಗಳ ಕಡೆ ಮತ್ತು ಹಳಬರ ಮಾತಿನಲ್ಲಿ ಇವು ಈಗಲೂ ಬಳಕೆಯಲ್ಲಿವೆ. ಈಗಿನ ಬರಹಗಾರರ ಗ್ರಂಥಗಳಲ್ಲಿ ದಿನದಿನಕ್ಕೆ ಇವುಗಳ ಪ್ರಯೋಗ ಕಡಮೆಯಾಗುತ್ತಿದೆ. ಸಂಸ್ಕೃತ ಇಂಗ್ಲಿಷ್ ಭಾಷೆಗಳ ಪ್ರಬಲ ಆಕರ್ಷಣೆ ಮತ್ತು ಪಟ್ಟಣದ ನಾಗರಿಕತೆಯ ಪ್ರಾಬಲ್ಯಗಳ ಪರಿಣಾಮವಾಗಿ ದಿನಬಳಕೆಯ ಕನ್ನಡ ಮಾತುಗಳೂ ಬಳಕೆ ತಪ್ಪಿ ಬಿದ್ದುಹೋಗುತ್ತಿವೆ. ಇದು ಕನ್ನಡಕ್ಕೆ ದೊಡ್ಡ ಹಾನಿ. ಹೀಗಾಗುವುದಕ್ಕೆ ಅವಕಾಶ ಕೊಡದಿರುವುದು ಒಳ್ಳೆಯದು. ಈ ಭಾವನೆಯನ್ನು ಮನಸ್ಸಿಗೆ ತಂದುಕೊಂಡು, ಈ ಪುಸ್ತಕದಲ್ಲಿ ಬಳಸಿರುವ ಅಚ್ಚ ಕನ್ನಡ ಮಾತುಗಳನ್ನು ಓದುಗರು ಒಪ್ಪಿಕೊಳ್ಳುವರೆಂದು ನಂಬಿದ್ದೇನೆ. ಕೆಲಕೆಲವರಿಗೆ ಅಪರಿಚಿತ ವಾಗಿರಬಹುದೆನ್ನಿಸಿದ ಮಾತುಗಳ ಅಭಿಪ್ರಾಯವನ್ನು ಅರ್ಥಕೋಶದಲ್ಲಿ ವಿಶದಪಡಿಸಿದೆ.

ಇದೇ ರೀತಿ ತಮಿಳಿನಲ್ಲಿರುವ ಇತರ ಮಹಾಕಾವ್ಯಗಳನ್ನೂ ತಿಳಿಗನ್ನಡ ದಲ್ಲಿ ಸಂಗ್ರಹಿಸಿ ಬರೆದು ಕನ್ನಡಿಗರಿಗೆ ಪರಿಚಯ ಮಾಡಿಕೊಡಬೇಕೆಂಬ ಉದ್ದೇಶವಿದೆ. ಈ ಪ್ರಯತ್ನಕ್ಕೆ ಕನ್ನಡ ಜನದ ಬೆಂಬಲ ದೊರೆಯುವುದೆಂದು ನಂಬಿದ್ದೇನೆ.

ಬೆಂಗಳೂರು
೮-೨-೧೯೫೬

ಎಲ್. ಗುಂಡಪ್ಪ

## ಕೆಲವು ಹೆಸರುಗಳು

| ಪೆರುಜ್ಞತೆಯಲ್ಲಿ | | | ಸಂಸ್ಕೃತ ಗ್ರಂಥಗಳಲ್ಲಿ |
|---|---|---|---|
| ಯೂಗಿ | .... | .... | ಯೌಗಂಧರಾಯಣ |
| ಪ್ರದ್ಯೋತನ | .... | .... | ಪ್ರದ್ಯೋತ |
| ಶಾಲಂಕಾಯ | .... | .... | ಶಾಲಂಕಾಯನ |
| ಶಾಂಕಿಯತ್ತಾಯ್ | .... | .... | ಸಾಂಕೃತ್ಯಾಯನಿ |
| ಲಾವಾಣ | .... | .... | ಲಾವಾಣಕ |

# ಒ ಳ ಪಿ ಡಿ

# ಉದಯನ ಕಥೆ

## ೧. ಆಕಾಶ ಪ್ರಯಾಣ

ನಮ್ಮ ಈ ಭರತಖಂಡದಲ್ಲಿ ವತ್ಸ ಎಂಬ ಒಂದು ರಾಜ್ಯ. ಕೌಶಾಂಬಿ ಅದರ ರಾಜಧಾನಿ. ಅಲ್ಲಿ ಬಹಳ ಹಿಂದಿನ ಕಾಲದಲ್ಲಿ ಶತಾನೀಕನೆಂಬ ಒಬ್ಬ ದೊರೆ ಧರ್ಮದಿಂದ ರಾಜ್ಯಭಾರ ನಡಸುತ್ತಿದ್ದನು.

ಶತಾನೀಕ ಕುರುವಂಶದವನು; ಪಾಂಡವರ ಸಂತತಿಯಲ್ಲಿ ಹುಟ್ಟಿದವನು. ಅವನಿಗೆ ಮೃಗಾವತಿ ಎಂಬ ಒಬ್ಬ ರಾಣಿಯಿದ್ದಳು. ಇಬ್ಬರೂ ಬಹಳ ಗುಣವಂತರು; ಪರಸ್ಪರ ಪ್ರೀತಿಯಿಂದ ಬಾಳುತ್ತಿದ್ದರು. ಪ್ರಜೆಗಳೆಲ್ಲ ಅವರನ್ನು ಮೆಚ್ಚಿ ಆನಂದಿಸುತ್ತಿದ್ದನು.

ಕಾಲಕ್ರಮದಲ್ಲಿ ಮೃಗಾವತಿ ಗರ್ಭತಾಳಿದಳು. ಪುಣ್ಯಪುರುಷನೊಬ್ಬನು ಆ ಗರ್ಭದಲ್ಲಿ ನೆಲಸಿ ಬೆಳೆಯುತ್ತಿದ್ದನು. ಮಹಾರಾಜನು ಮೃಗಾವತಿಯ ಬಯಕೆಗಳನ್ನೆಲ್ಲಾ ಸಲ್ಲಿಸಿ ಆದರಿಸುತ್ತಿದ್ದನು.

ನವಮಾಸ ತುಂಬುತ್ತಾ ಬಂತು. ಆಗ ಒಂದು ದಿನ ರಾಣಿಗೆ ಒಂದು ವಿಚಿತ್ರವಾದ ಬಯಕೆಯುಂಟಾಯಿತು; ಅರಮನೆಯ ಮೇಲುಗಡೆಯ ಬೆಳುದಿಂಗಳ ಮಚ್ಚಿನಲ್ಲಿ ತನ್ನ ಮಂಚವನ್ನು ಹಾಕಿಸಿದಳು ; ಮಂಚಕ್ಕೆ ಕೆಂಪು ಹೂಗಳಿಂದಲೂ ಕೆಂಪು ಬಟ್ಟೆಗಳಿಂದಲೂ ಅಲಂಕಾರ ಮಾಡಿಸಿದಳು; ತಾನೂ ಕೆಂಪನೆಯ ಪಟ್ಟೆ ಬಟ್ಟೆಯನ್ನುಟ್ಟು ಕೆಂಬಣ್ಣದ ಒಡವೆಗಳನ್ನೂ ಹೂಮಾಲೆಗಳನ್ನೂ ಧರಿಸಿದಳು. ತನ್ನ ಸಖಿಯರಿಗೂ ದಾಸಿಯರಿಗೂ ತನ್ನಂತೆಯೇ ಕೆಂಬಣ್ಣದ ಉಡಿಗೆ ತೊಡಿಗೆಗಳನ್ನು ಹಾಕಿಸಿದಳು. ಅಲ್ಲಿ ಬಂದ ಬೆಳುದಿಂಗಳೂ ಕೆಂಪಾದಂತೆ ಕಾಣುತ್ತಿತ್ತು. ಚೆಲುವಾದ ಕೆಂದಾವರೆಯಂತೆ ಆಕೆ ಮಂಚದ ಮೇಲೆ ಮಲಗಿ ನಿದ್ರಿಸುತ್ತಿದ್ದಳು.

ಹಾಗೆ ನಿದ್ರಿಸುತ್ತಿರುವಾಗ * ಶರಭ ಪಕ್ಷಿಯೊಂದು ಆಕಾಶದಲ್ಲಿ ಆ ಮಾರ್ಗವಾಗಿ ಹಾರಿ ಬಂತು. ಕೌಶಾಂಬಿಯ ಅರಮನೆಯ ನೇರಕ್ಕೆ ಬಂದಾಗ ರಾಣಿ ಮಲಗಿದ್ದ ಮಂಚದ ಮೇಲೆ ಅದರ ದೃಷ್ಟಿ ಬಿತ್ತು. ಒಂದು ಮಾಂಸದ ಮುದ್ದೆ ಸಿಕ್ಕಿತೆಂದು ಮೇಲ್ಮಚ್ಚಿನ ಮೇಲೆರಗಿ ಮಂಚವನ್ನೆತ್ತಿಕೊಂಡು ಹಾರಿಹೋಯಿತು. ಎಲ್ಲರಿಗೂ ಗಾಢನಿದ್ರೆ. ಯಾರೊಬ್ಬರಿಗೂ ಇದರ ಅರಿವಾಗಲಿಲ್ಲ.

ಶರಭ ಬಹು ದೂರ ಹಾರಿ ಹೋಯಿತು. ಬೆಳಕು ಹರಿಯುವಷ್ಟರಲ್ಲಿ ಅದು ವಿಪುಲಗಿರಿಯೆಂಬ ದೊಡ್ಡ ಪರ್ವತವನ್ನು ತಲುಪಿತು; ಅದರ ತಪ್ಪಲಿನಲ್ಲಿ ಕೆಳಗಿಳಿದು ಮಂಚವನ್ನು ಮೆಲ್ಲನೆ ನೆಲದ ಮೇಲಿಟ್ಟು ಮಾಂಸವನ್ನು ತಿನ್ನಲು ಸಿದ್ಧವಾಯಿತು. ಆಗ ಮೃಗಾವತಿ ಎಚ್ಚತ್ತು ಕಣ್ಣು ಬಿಟ್ಟಳು. ಮಾಂಸದ ಮುದ್ದೆ ಚಲಿಸಿದ್ದನ್ನು ಕಂಡು, ಅದೊಂದು ಸಜೀವ ಮನುಷ್ಯಪ್ರಾಣಿಯೆಂದರಿತು, ಶರಭಕ್ಕೆ ದಿಗಿಲಾಯಿತು; ತಿನ್ನುವ ಆಸೆಯನ್ನು ತೊರೆದು ತಟ್ಟನೆ ಹಾರಿ ಹೊರಟು ಹೋಯಿತು.

ರಾಣಿ ಕಣ್ಣು ಬಿಟ್ಟು ಸುತ್ತಲೂ ನೋಡಿದಳು. ಸಖಿಯರಿಲ್ಲ, ದಾಸಿಯರಿಲ್ಲ ಅರಮನೆಯೂ ಕಾಣಿಸಲಿಲ್ಲ; ಯಾವುದೋ ಮಹಾರಣ್ಯದ ಮಧ್ಯದಲ್ಲಿ ತಾನೊಬ್ಬಳೇ ಒಂಟಿಯಾಗಿರುವುದು ಕಂಡುಬಂತು. ಬಹಳ ಭಯವಾಯಿತು; ತಲ್ಲಣಿಸಿ ಗೋಳಾಡಿದಳು. ಅಲ್ಲಿ, ಯಾರೂ ಇಲ್ಲದ ಕಡೆ ಅತ್ತು ಕರೆದರೆ ಪ್ರಯೋಜನವೇನು ? ಅದು ಕೇವಲ ಅರಣ್ಯ ರೋದನವಾಯಿತು.

## ೨. ಕುಮಾರ ಜನ್ಮ

ಮೊದಲೇ ಆಕೆ ತುಂಬುಗರ್ಭಿಣಿ; ಆಕಾಶಮಾರ್ಗದಲ್ಲಿ ಹಾರಿ ಬಂದ ಆಯಾಸ ಬೇರೆ; ಅದರ ಜೊತೆಗೆ ಅಕಸ್ಮಾತ್ತಾಗಿ ತಲೆದೋರಿದ ದಿಗಿಲೂ

* ಶರಭ ಬಹು ಬಲಶಾಲಿಯಾದ ಪಕ್ಷಿ, ಬಹು ವೇಗಶಾಲಿ. ಎಂಟು ಕಾಲಿನ ಸಿಂಹದಂಥ ಒಂದು ಮೃಗವೆಂದೂ ವರ್ಣನೆಯುಂಟು.

ಸೇರಿತು. ಇದರ ಫಲವಾಗಿ ಅತ್ತತ್ತ ಸೊರಗಿದ ರಾಣಿಗೆ ಪ್ರಸವವೇದನೆ ಕಾಣಿಸಿಕೊಂಡಿತು. ಉದಿಸುವ ಸೂರ್ಯನ ಹೊಂಬೆಳಗು ಪೂರ್ವ ದಿಗಂತವನ್ನು ವ್ಯಾಪಿಸುತ್ತಿರಲು ಮಹಾರಾಣಿ ಗಂಡು ಮಗುವನ್ನು ಹೆತ್ತಳು.

ಕಳೆಸೂಸುವ ಮುದ್ದು ಮಗುವಿನ ಮುಖವನ್ನು ಕಂಡೊಡನೆಯೆ ಮೃಗಾವತಿಯ ದಿಗಿಲೆಲ್ಲ ಮಾಯವಾಯಿತು; ನೋವೆಲ್ಲ ಮರೆತುಹೋಯಿತು, ಪ್ರೀತಿಯಿಂದ ಮಗುವನ್ನು ಎತ್ತಿ ಎದೆಗವಚಿಕೊಂಡು ಆನಂದ ಬಾಷ್ಪವನ್ನು ಸುರಿಸಿದಳು. ಮರುಕ್ಷಣವೇ ತನ್ನ ಆಗಿನ ನೆಲೆ ಅರಿವಾಯಿತು. ಮತ್ತೆ ಸಂಕಟದಿಂದ ಅಳತೊಡಗಿದಳು.

ಆ ಸಮೀಪದ ಹೊಳೆಯಲ್ಲಿ ಮೀಯುವುದಕ್ಕೆ ಬಂದಿದ್ದ ಒಬ್ಬ ಮುನಿ ಅವಳ ಅಳುವಿನ ಸದ್ದು ಕೇಳಿ ಓಡಿ ಬಂದರು; ಹೆದರಬೇಡವೆಂದು ಧೈರ್ಯ ಹೇಳಿ ಸಮಾಧಾನಪಡಿಸಿದನು; ಹತ್ತಿರದಲ್ಲಿಯೇ ಇದ್ದ ತಮ್ಮ ಆಶ್ರಮಕ್ಕೆ ತಾಯಿಮಕ್ಕಳನ್ನು ಕರೆದುಕೊಂಡು ಹೋದನು.

ಆ ಮುನಿ ಬೇರೆ ಯಾರೂ ಅಲ್ಲ; ಮೃಗಾವತಿಯ ತಂದೆ ಶೇಷಕ ಮಹಾರಾಜ. ಆತ ರಾಜ್ಯವನ್ನು ವಿಕ್ರಸೆಂಬ ತನ್ನ ಮಗನಿಗೆ ಕೊಟ್ಟು ಸಂನ್ಯಾಸ ತಾಳಿ ವಿಪುಲಗಿರಿಯಲ್ಲಿ ತಪಸ್ಸು ಮಾಡುತ್ತಿದ್ದರು. ಅವರು ತನ್ನ ತಂದೆಯೆಂದರಿತು ಮೃಗಾವತಿಗೂ ಸಮಾಧಾನವಾಯಿತು. ಶೇಷಕ ಮುನಿಗಳು ತಮ್ಮ ಆಶ್ರಮದಲ್ಲಿದ್ದ ಮಹಾ ತಪಸ್ವಿಗಳಾದ ಬ್ರಹ್ಮಸುಂದರ ಮುನಿಗಳಿಗೂ ಅವರ ಹೆಂಡತಿ ಪರಮಸುಂದರಿಗೂ ಮೃಗಾವತಿಯ ಪೋಷಣೆಯನ್ನು ವಹಿಸಿಕೊಟ್ಟರು. ಅವರ ಆಶ್ರಯದಲ್ಲಿ ರಾಣಿ ನಿಶ್ಚಿಂತಳಾಗಿದ್ದಳು.

ಸೂರ್ಯೋದಯ ಸಮಯದಲ್ಲಿ ಹುಟ್ಟಿದ್ದರಿಂದ ಶೇಷಕ ಮುನಿಗಳು ಮಗುವಿಗೆ 'ಉದಯನ' ಎಂದು ಹೆಸರಿಟ್ಟರು. "ಇವನು ಬಹು ಪ್ರಸಿದ್ಧ ಪುರುಷನಾಗುತ್ತಾನೆ" ಎಂದು ತಮ್ಮ ಜ್ಞಾನದೃಷ್ಟಿಯಿಂದ ಕಂಡು ಭವಿಷ್ಯ ಹೇಳಿದರು.

ಉದಯನ ಕುಮಾರನು ಬಾಲ ಚಂದ್ರನಂತೆ ದಿನ ದಿನಕ್ಕೆ ಕಳೆಯೇರಿ ಬೆಳೆಯುತ್ತ ಬಂದನು. ಸಕಾಲದಲ್ಲಿ ಅವನಿಗೆ ಅಕ್ಷರಾಭ್ಯಾಸವಾಯಿತು;

ಅರಸರಿಗೆ ತಕ್ಕ ಹಲವು ಕಲೆಗಳನ್ನೂ ಮುನಿಗಳು ಕಲಿಸತೊಡಗಿದರು. ಬ್ರಹ್ಮಸುಂದರ ಮುನಿಗಳ ಮಗ ಯೂಗಿಯೆಂಬುವನು ಉದಯನನ ಸಹಪಾಠಿ ಈ ಇಬ್ಬರೂ ಒಡನಾಡಿ ಒಡನೋದಿ ಸಂಗಾತಿಯನ್ನು ಬೆಳೆಯುತ್ತಾ ಒಬ್ಬರಲ್ಲೊಬ್ಬರು ಪರಮ ಪ್ರೀತಿಯಿಟ್ಟು ಪ್ರಾಣಸ್ನೇಹಿತರಾದರು. ಬ್ರಹ್ಮ ಸುಂದರ ಮುನಿಗಳ ಮತ್ತು ಶೇಷಕ ಮುನಿಗಳ ಮೆಚ್ಚಿಕೆ ಪಡೆದು ಅವರಿಂದ ಶಿಕ್ಷಿತರಾಗಿ ಸಮಸ್ತ ವಿದ್ಯೆಗಳನ್ನೂ ಕಲಿತು ಮೇಲ್ಮೆ ಪಡೆದರು.

## ೩. ದೇವ ಗಜ

ಬ್ರಹ್ಮಸುಂದರ ಮುನಿಗಳಲ್ಲಿ ಘೋಷವತಿಯೆಂಬ ಒಂದು ವೀಣೆಯಿತ್ತು. ಅದು ಇಂದ್ರನಿಂದ ಅವರಿಗೆ ದೊರೆತದ್ದು. ಅದರ ಇನಿದನಿಗೆ ಸಮಸ್ತ ಪ್ರಾಣಿಗಳು ಮೈಮರೆತು ಪರವಶವಾಗುತ್ತಿದ್ದವು. ಉದಯನ ಕುಮಾರ ನಿಗೆ ಮುನಿಗಳು ಗಾನವಿದ್ಯೆಯನ್ನು ಕಲಿಸಿ ಮಂತ್ರೋಪದೇಶಮಾಡಿ ಘೋಷವತಿಯನ್ನು ಬಾಜಿಸ ಹೇಳಿದರು. ಉದಯನನು ಬಾಜಿಸುತ್ತಿರಲು ಕಾಡಾನೆಗಳೂ ಇತರ ಮೃಗ ಪಕ್ಷಿಗಳೂ ಅವನ ಸುತ್ತಲೂ ನೆರೆದವು; ಅವು ಅವನು ಹೇಳಿದಂತೆ ಕೇಳುತ್ತಿದ್ದವು. ಅದನ್ನರಿತು ಮುನಿಗಳು ಮೆಚ್ಚಿ ಆ ವೀಣೆಯನ್ನು ಅವನಿಗೇ ಕೊಟ್ಟುಬಿಟ್ಟರು. “ಈ ವಿದ್ಯೆ ನಿನಗೆ ಚೆನ್ನಾಗಿ ಸಿದ್ಧಿಸಲಿ” ಎಂದು ಆಶೀರ್ವದಿಸಿದರು. ‘‘ಇನ್ನು ಮುಂದೆ ಇವನ ಯೋಗ ಕ್ಷೇಮ ನಿನಗೆ ಸೇರಿದ್ದು” ಎಂದು ತನ್ನ ಮಗ ಯೂಗಿಯನ್ನೂ ಘೋಷವತಿ ಯೊಡನೆಯೇ ಉದಯನನಿಗೆ ಒಪ್ಪಿಸಿಬಿಟ್ಟರು.

ಒಂದು ದಿನ ಕಾಡಿನಲ್ಲಿ ವಿಹರಿಸುತ್ತಿದ್ದಾಗ ಒಂದು ಅದ್ಭುತವಾದ ಆನೆ ಗೋಚರಿಸಿತು. ' ಹತ್ತು ಸಾವಿರ ಆನೆಗಳ ಬಲವುಳ್ಳ ಆ ದೈವಿಕ ಆನೆ ಹಲವು ಹೆಣ್ಣಾನೆಗಳು ಸುತ್ತುವರಿದು ಬರುತ್ತಿರಲು ಕಾಡಿನಲ್ಲಿ ಸ್ವೇಚ್ಛೆಯಾಗಿ ತಿರು ಗಾಡುತ್ತಿತ್ತು. ಅದನ್ನು ಕಂಡ ಉದಯನ ಕುಮಾರನು ಘೋಷವತಿ ಯನ್ನು ಕೈಗೆತ್ತಿಕೊಂಡು ಮಂತ್ರಧ್ಯಾನ ಮಾಡುತ್ತ ಬಾಜಿಸತೊಡಗಿದನು. ಆ ದೈವ ಗಜ ಪ್ರೀತಿಯಿಂದ ಅವನ ಹತ್ತಿರ ಬಂದು ಅವನನ್ನು ತನ್ನ ಬೆನ್ನ

ಮೇಲೆ ಹತ್ತಿಸಿಕೊಂಡಿತು. ಅದರ ಮೇಲೇರಿ ಉದಯನು ಆಶ್ರಮದಲ್ಲಿ ತನ್ನ ನೆಲೆಗೆ ಹೋಗಿ ಸೇರಿದನು.

ಆನೆಗೆ ಉದಯನನಲ್ಲಿ ಅಗಾಧವಾದ ಪ್ರೀತಿ ಬೆಳೆಯಿತು. ಅವನನ್ನು ಬಿಟ್ಟಗಲದೆ ಅವನು ಹೇಳಿದ ಕೆಲಸಗಳನ್ನೆಲ್ಲ ಮಾಡುತ್ತ ಬಂತು. ಒಂದು ದಿನ ರಾತ್ರಿ ಆ ಆನೆ ಉದಯನನ ಕನಸಿನಲ್ಲಿ ಕಾಣಿಸಿಕೊಂಡು, "ನಾನು ನಿನ್ನ ಜೊತೆಯಲ್ಲೇ ಇರುತ್ತೇನೆ. ಆದರೆ, ನನ್ನ ಮೇಲೆ ಮಾವಟಿಗರನ್ನು ಹತ್ತಿರ ಕೊಡದೆ ; ತೊಗಲ ಹಗ್ಗದಿಂದ ನನ್ನನ್ನು ಕಟ್ಟಕೂಡದು ; ನಾನು ಮೇವು ತೆಗೆದುಕೊಳ್ಳುವುದಕ್ಕೆ ಮೊದಲು ನೀನು ಆಹಾರ ತೆಗೆದುಕೊಳ್ಳಕೂಡದು. ಇದು ಯಾವುದಕ್ಕೆ ತಪ್ಪಿದರೂ ನಿನ್ನನ್ನು ಬಿಟ್ಟುಹೋಗುತ್ತೇನೆ" ಎಂದಿತು. ಉದಯನನಿಗೆ ಪರಮ ಸಂತೋಷವಾಯಿತು. ಆ ಮೂರು ತಪ್ಪು ಆಗದಂತೆ ಬಹು ಎಚ್ಚರಿಕೆಯಿಂದ ಇರುತ್ತಿದ್ದನು. ದೇವಗಜವೂ ಘೋಷವತಿಯ ಇನಿದನಿಯನ್ನಾಲಿಸುತ್ತಾ ಪರಮಾನಂದದಿಂದ ಅವನ ಅಪ್ಪಣೆ ನಡೆಸುತ್ತ ಅವನ ಬಳಿಯಲ್ಲೇ ನಿಂತಿತು.

## ೪. ರಾಜ್ಯ ಗಮನ

ಹೀಗಿರುವಲ್ಲಿ ಚೇದಿದೇಶದ ದೊರೆ ವಿಕ್ರಮನಿಗೆ ರಾಜ್ಯಭಾರದಲ್ಲಿ ಜುಗುಪ್ಸೆಯುಂಟಾಯಿತು. ಒಮ್ಮೆ ಆತ ವಿಪುಲಗಿರಿಗೆ ಬಂದು ತಂದೆ ಶೇಷಕ ಮುನಿಗಳ ಉಪದೇಶವನ್ನು ಕೇಳುತ್ತ ಕುಳಿತಿದ್ದನು. ಆ ಸಮಯದಲ್ಲಿ ಸ್ವಾಭಾವಿಕವಾಗಿಯೇ ಆಯೆಡೆಗೆ ಬಂದ ಉದಯನ ಕುಮಾರನನ್ನು ಕಂಡು ಅವನಿಗೆ ವಿಸ್ಮಯವಾಯಿತು. ಅವನು ಯಾರೆಂದು ವಿಚಾರಿಸಿ, ತನ್ನ ತಂಗಿ ಮೃಗಾವತಿಯ ಮಗನೆಂದು ತಿಳಿದು ಅವನು ಪರಮ ಸಂತೋಷಗೊಂಡನು. ತನಗೆ ಮಕ್ಕಳಿಲ್ಲದ್ದರಿಂದ ಈ ಸೋದರಳಿಯನಿಗೇ ತನ್ನ ರಾಜ್ಯವನ್ನು ಒಪ್ಪಿಸಬೇಕೆಂದು ನಿಶ್ಚಯಿಸಿದನು. ಶೇಷಕಮುನಿಗಳನ್ನು ಪ್ರಾರ್ಥಿಸಿ, ತಂಗಿಯನ್ನೂ ಒಡಂಬಡಿಸಿದನು. ಅವರಿಬ್ಬರನ್ನೂ ಜೊತೆಯಲ್ಲಿ ಕರೆದುಕೊಂಡು ತನ್ನ ರಾಜಧಾನಿಯಾದ ವೈಶಾಲೀ ನಗರಕ್ಕೆ ಹಿಂದಿರುಗಿ ಅಲ್ಲಿ ಉದಯನನಿಗೆ

ಪಟ್ಟಕಟ್ಟಿ ತಾನು ತಪಸ್ಸು ಮಾಡುವುದಕ್ಕಾಗಿ ವಿಪುಲಗಿರಿಗೆ ಪ್ರಯಾಣ ಮಾಡಿದನು

ಯೂಗಿ ಉದಯನನಿಗೆ ಮುಖ್ಯಮಂತ್ರಿಯಾದನು. ಉದಯನನ ಪರಾಕ್ರಮ, ಯೂಗಿಯ ಬುದ್ಧಿಶಕ್ತಿ, ದೈವಿಕ ಆನೆಯ ಸಹಾಯ ಮೂರೂ ಕೂಡಿದ್ದರಿಂದ ಆ ನಾಡಿನಲ್ಲಿ ದುಷ್ಟರಿಗೂ, ಹಗೆಗಳಿಗೂ ಎಡೆಯಿಲ್ಲವಾಯಿತು. ರಾಜಕುಮಾರನೂ ಮೇಲೆ ಬಿದ್ದ ಹಲವರು ಹಗೆಗಳನ್ನು ಗೆದ್ದು ನಾಡನ್ನು ವಿಸ್ತರಿಸಿ ಪ್ರಜೆಗಳನ್ನು ಸುಖದಿಂದ ಪಾಲಿಸುತ್ತ ಬಂದನು.

ಇತ್ತ ಕೌಶಾಂಬಿಯಲ್ಲಿ ಶತಾನೀಕ ಮಹಾರಾಜನು ತನ್ನರಸಿ ಮೃಗಾವತಿ ಆ ರೀತಿ ಹಠಾತ್ತನೆ ಕಣ್ಮರೆಯಾದುದನ್ನು ತಿಳಿದು ಬಹಳ ದುಃಖಿತನಾದನು. ಆಕೆಯ ಸುಳಿವು ತಿಳಿದು ಹುಡುಕಿ ತರಬೇಕೆಂದು ಸದಾ ಪ್ರಯತ್ನಿಸುತ್ತಲೇ ಇದ್ದನು. ವರ್ಷಗಳುರುಳಿದರೂ ಪ್ರಯತ್ನ ಫಲಿಸಲಿಲ್ಲ ಕಡೆಗೆ ಒಬ್ಬ ಮುನಿಯು ಹೇಳಿದ ಭವಿಷ್ಯವನ್ನು ಕೇಳಿ, ಹೆಂಡತಿಯನ್ನು ಮತ್ತೆ ಕಾಣುವ ನಂಬಿಕೆಯಿಂದ ಹಾಗೂ ಹೀಗೂ ಕಾಲತಳ್ಳುತ್ತಿದ್ದನು.

ಹೀಗಿರುವಾಗ ಚೇದಿನಾಡಿಗೆ ಉದಯಕುಮಾರ ದೊರೆಯಾದನೆಂಬ ಸುದ್ದಿ ಬಂತು ; ಅವನ ಪೂರ್ವಸಂಗತಿಯೆಲ್ಲವೂ ತಿಳಿಯಿತು. ಕೇಳಿದ ಕೂಡಲೆ ಶತಾನೀಕನು ವೈಶಾಲಿಗೆ ಹೋಗಿ ಹೆಂಡತಿಯನ್ನೂ ಮಗನನ್ನೂ ಕಂಡು ಆನಂದಗೊಂಡನು. ಗಂಡನ ಪ್ರೀತಿ ತನ್ನಲ್ಲಿ ಏಕರೀತಿಯಾಗಿರುವುದನ್ನರಿತು ಮೃಗಾವತಿ ತೃಪ್ತಳಾದಳು. ಉದಯನ ಕುಮಾರನೂ ತನ್ನ ತಂದೆಯನ್ನು ಕಂಡು ಸಂತುಷ್ಟನಾದನು; ಪ್ರೀತಿಯಿಂದ ಉಪಚರಿಸಿದನು.

ಶತಾನೀಕನು ಕೆಲವು ದಿನ ಅವನ ಶುಶ್ರೂಷೆಯನ್ನು ಸ್ವೀಕರಿಸುತ್ತಾ ವೈಶಾಲೀ ನಗರದಲ್ಲಿ ಉಳಿದನು. ಆ ಮೇಲೆ ಅಲ್ಲಿನ ಅರಸಾಳ್ಕೆಗೆ ಬೇರೆ ಯಾರೂ ಇಲ್ಲದ್ದರಿಂದ ಮಗನನ್ನು ಅಲ್ಲಿಯೇ ಬಿಟ್ಟು, ಮಹಾರಾಣಿ ಮೃಗಾವತಿಯನ್ನು ಒಡಗೊಂಡು ಕೌಶಾಂಬಿಗೆ ಹಿಂದಿರುಗಿದನು. ಉದಯನನೂ ಆಗಾಗ ಕೌಶಾಂಬಿಗೆ ಬಂದು ತಂದೆತಾಯಿಗಳೊಡನೆ ಕೆಲಕಾಲ ಇದ್ದು ನಲಿಯುತ್ತಿದ್ದನು.

ಮುಂದೆ ಕೆಲಕಾಲ ಕಳೆಯಲು ಮೃಗಾವತಿಗೆ ಮತ್ತಿಬ್ಬರು ಮಕ್ಕಳಾದರು. ಒಬ್ಬನ ಹೆಸರು ಪಿಂಗಲ, ಮತ್ತೊಬ್ಬನ ಹೆಸರು ಕಟಕ. ಇಬ್ಬರೂ ಬೆಳೆದು ವಿದ್ಯಾವಂತರಾಗಿ ಬೆಳಗಿದರು.

ಇಷ್ಟರಲ್ಲಿ ಶತಾನೀಕನಿಗೆ ರಾಜ್ಯಭಾರದಲ್ಲಿ ಬೇಸರವಾಯಿತು, ತಪೋವನದಲ್ಲಿ ಬಯಕೆಯಾಯಿತು. ಉದಯನನ್ನು ಕರಸಿಕೊಂಡು ಅವನಿಗೆ ರಾಜ್ಯವನ್ನೊಪ್ಪಿಸಿ ತಪಸ್ಸಿಗೆ ನಡೆದನು.

ತಂದೆ ತಪಸ್ಸಿಗೆ ಹೋದಮೇಲೆ ಉದಯನ ಕುಮಾರನು ಕೌಶಾಂಬಿಯಲ್ಲೇ ಉಳಿದು ಎರಡು ರಾಜ್ಯಗಳ ಆಡಳಿತವನ್ನೂ ನೋಡಿಕೊಳ್ಳುತ್ತಿದ್ದನು. ಸ್ವಲ್ಪ ಕಾಲ ಕಳೆದಮೇಲೆ ಅದು ಸರಿಹೋಗುವುದಿಲ್ಲವೆಂದು ಕಂಡುಬಂತು. ಆಗ ತನ್ನ ಮೊದಲ ಮಂತ್ರಿಯೂ ಪ್ರಾಣ ಸ್ನೇಹಿತನೂ ಆದ ಯೂಗಿಗೆ ವೈಶಾಲಿಯ ರಾಜ್ಯಭಾರವನ್ನು ವಹಿಸಿಕೊಟ್ಟು, ತಾನು ಕೌಶಾಂಬಿಯನ್ನು ಮಾತ್ರ ಆಳುತ್ತಿದ್ದನು.

ಯೂಗಿಯಲ್ಲದೆ ಅವನಿಗೆ ಮತ್ತೂ ಮೂವರು ಮಂತ್ರಿಗಳಿದ್ದರು; ವಸಂತಕ, ರುಮಣ್ವಂತ, ವೃಷಭಕ ಎಂದು. ಇವರು ಮಂತ್ರಿಗಳು ಮಾತ್ರವಲ್ಲ, ಆಪ್ತ ಮಿತ್ರರು; ಹೊರಗೆ ಸುತ್ತಾಡಿ ಬರುವ ಪ್ರಾಣಗಳೋ ಎಂಬಂತಿದ್ದರು. ಇವರ ಮತ್ತು ದೈವಿಕ ಆನೆಯ ನೆರವಿನಿಂದ ರಾಜ್ಯ ನಿಷ್ಕಂಟಕವಾಯಿತು; ಜನಕ್ಕೆ ಸುಖ ಸಮೃದ್ಧಿ ಕೈಸೇರಿತು.

ವಿದ್ಯೆಯಲ್ಲಿಯೂ ವೀರ್ಯದಲ್ಲಿಯೂ ರಾಜ್ಯ ಶಾಸನಸಾಮರ್ಥ್ಯದಲ್ಲಿಯೂ ಉದಯನು ಸರ್ವಶ್ರೇಷ್ಠನೆಂಬ ಹೊಗಳಿಕೆ ಲೋಕದಲ್ಲೆಲ್ಲ ಹರಡಿತು.

## ೫. ಆನೆ ಅಗಲಿತು

ಒಂದು ದಿನ ನಾಟ್ಯರಂಗದಲ್ಲಿ ಚೆಲುವೆಯರು ಸೊಗಸಾಗಿ ಆಡುತ್ತಿದ್ದರು, ಇಂಪಾಗಿ ಹಾಡುತ್ತಿದ್ದರು. ಗಾನದಲ್ಲೂ ನಾಟ್ಯದಲ್ಲೂ ಮನಸಿಟ್ಟು,

ಉದಯನು ಮೈಮರೆತನು. ಆಗ ಹಸಿವೂ ಹೆಚ್ಚಾಗಿತ್ತು. ವಾಡಿಕೆಯಂತೆ ದೈವಿಕ ಆನೆಗೆ ಆಹಾರ ಕೊಡುವುದನ್ನು ಮರೆತು ತಾನು ಊಟ ಮಾಡಿಬಿಟ್ಟನು. ಆನೆ ಅದನ್ನರಿತು ತುಂಬ ವ್ಯಥೆಪಟ್ಟಿತು. 'ನನ್ನ ಪುಣ್ಯ ಕ್ಷೀಣವಾಗಿ ಉದಯನ ಮಾತು ಮೀರಿದನು!' ಎಂದು ಸಂಕಟಪಡುತ್ತ ಅವನನ್ನು ತೊರೆದು ತನ್ನ ಮೊದಲಿನ ಸ್ಥಳಕ್ಕೇ ಹೊರಟುಹೋಯಿತು.

ಘೋಷವತಿಯನ್ನು ಬಾಜಿಸುವ ಸಮಯದಲ್ಲಿ ಎಂದಿನಂತೆ ಆನೆಯಿರಬೇಕಾದ ಕಡೆಗೆ ಉದಯನನ ದೃಷ್ಟಿ ಹೊರಳಿತು. ಅಲ್ಲಿ ಅದು ಕಾಣಿಸಲಿಲ್ಲ. ಆಗ ನೆನಪಾಯಿತು ತನ್ನ ತಪ್ಪು. ದೈವಿಕ ಆನೆಯನ್ನು ಕಳೆದುಕೊಂಡಿದ್ದರಿಂದ ಅವನಿಗಾದ ವ್ಯಥೆ ಅಷ್ಟಿಷ್ಟಲ್ಲ. "ಹೇಗಾದರೂ ಹುಡುಕಿ ತರುತ್ತೇವೆ" ಎಂದು ಮಂತ್ರಿಗಳು ಹಲವು ರೀತಿಯಲ್ಲಿ ಸಮಾಧಾನ ಹೇಳಿದರು. ಆದರೂ ವ್ಯಥೆ ತಣಿಯಲಿಲ್ಲ. ಉದಯನನು ಕಳವಳದ ಕಡಲಿನಲ್ಲಿ ಮುಳುಗಿ, ದಿನದಿನವೂ ಕಾಡುಗಳಿಗೆ ಹೋಗಿ ವೀಣೆ ಹಿಡಿದು ಅಲೆಯತೊಡಗಿದನು.

## ೬. ಪ್ರದ್ಯೋತನ ಚಕ್ರವರ್ತಿ

ಅವಂತಿ ವತ್ಸನಾಡಿಗೆ ನೆರೆನಾಡು. ಉಜ್ಜಯಿನಿ ಅದರ ರಾಜಧಾನಿ. ಪ್ರದ್ಯೋತನ ಅಲ್ಲಿಯ ರಾಜ. ಆತ ರಾಜ ಮಾತ್ರವಲ್ಲ, ಚಕ್ರವರ್ತಿ. ಅನೇಕ ರಾಜರು ಅವನಿಗೆ ಅಧೀನರಾಗಿ ಕಪ್ಪಕೊಟ್ಟುಕೊಂಡು ಬರುತ್ತಿದ್ದರು. ಅವನ ಸೈನ್ಯ ಎಣಿಕೆಗೆ ಮೀರಿತ್ತು; ಅದರಿಂದ ಅವನಿಗೆ ಮಹಾಸೇನನೆಂಬ ಅನ್ವರ್ಥನಾಮ ಬಳಕೆಯಾಗಿತ್ತು. ಅವನ ಪಟ್ಟದ ಆನೆ ನಳಗಿರಿ ಮಹಾವೀರ್ಯವುಳ್ಳದ್ದೂ ಬಹು ದೊಡ್ಡದೂ ಆಗಿ ಲೋಕಪ್ರಸಿದ್ಧವಾಗಿತ್ತು. ಅವನಲ್ಲಿ ಭದ್ರಾವತಿಯೆಂಬ ಮತ್ತೊಂದು ಹೆಣ್ಣಾನೆಯಿತ್ತು. ಅದು ನಳಗಿರಿಗೆ ಮಾತ್ರ ಎರಡನೆಯದು. ಎರಡೂ ಮಹಾ ವೇಗಶಾಲಿಗಳು. ಪ್ರದ್ಯೋತನನಿಗೆ ಹಲವು ಮಂದಿ ಮಕ್ಕಳು. ಗಂಡುಮಕ್ಕಳಲ್ಲಿ ಪಾಲಕ, ಬಾಲಕುಮಾರ, ಗೋಪಾಲಕ ಎಂಬುವರು ಪ್ರಸಿದ್ಧರು. ಹೆಣ್ಣುಮಕ್ಕಳಲ್ಲಿ ವಾಸವದತ್ತೆ ಎಲ್ಲರಿಗೂ ಮೇಲಾದವಳು; ದೇವೇಂದ್ರನ ಅನುಗ್ರಹದಿಂದ

ಹುಟ್ಟಿದವಳು. ಪಟ್ಟದ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದ ಆಕೆ, ಎಣೆಯಿಲ್ಲದ ಚೆಲುವೆಯೆಂದು ಕೀರ್ತಿ ಪಡೆದಿದ್ದಳು.

ಉದಯನ ಬಹು ಅಭಿಮಾನಿ. ಚಕ್ರವರ್ತಿಗೂ ತಗ್ಗಿ ನಡೆಯಲು ಒಪ್ಪಲಿಲ್ಲ. ಒಂದು ದಿನ ಚಕ್ರವರ್ತಿ, "ಎಲ್ಲ ಅರಸರೂ ತಪ್ಪದೆ ಕಪ್ಪ ಸಲ್ಲಿಸುತ್ತಿರುವರೋ ?" ಎಂದು ವಿಚಾರಿಸಿದನು. ಆಗ, "ವತ್ಸ ನಾಡರಸನೂ ವೈಶಾಲೀ ನಗರದರಸನೂ ವಾಡಿಕೆಯಂತೆ ಸಲ್ಲಿಸಲಿಲ್ಲ" ಎಂದು ಗಣಕರು ವಿಜ್ಞಾಪಿಸಿದರು. ಅವರಿಬ್ಬರನ್ನೂ ಹಿಡಿತರಿಸಿ ವಿಚಾರಿಸತಕ್ಕದ್ದೆಂದು ಚಕ್ರವರ್ತಿಯ ಅಪ್ಪಣೆಯಾಯಿತು.

ಪ್ರದ್ಯೋತನ ಪ್ರಧಾನ ಮಂತ್ರಿ ಶಾಲಂಕಾಯನೆಂಬುವನು ನೀತಿಶಾಸ್ತ್ರದಲ್ಲಿಯೂ ತಂತ್ರದಲ್ಲಿಯೂ ಬಹು ಸಮರ್ಥನಾಗಿದ್ದನು. ಅವನು ಉದಯನನ ವಿಷಯವನ್ನೆಲ್ಲ ಚಕ್ರವರ್ತಿಗೆ ತಿಳಿಯಹೇಳಿ ಹೀಗೆ ಸಲಹೆ ಮಾಡಿದನು: "ಉದಯನ ಮಹಾಶೂರ. ಅವನಿಗೆ ಪರಾಕ್ರಮಶಾಲಿಗಳಾದ ಬುದ್ಧಿವಂತರಾದ ಮಂತ್ರಿಗಳ ಸಹಾಯವಿದೆ. ಅವನ ಮಿತ್ರನೂ ಮುಖ್ಯಮಂತ್ರಿಯೂ ಆದ ಯೂಗಿ ಈಗ ವೈಶಾಲಿಗೆ ರಾಜನಾಗಿದ್ದಾನೆ. ಅವರಿಬ್ಬರೂ ಸೇರಿದರೆ ಅವರನ್ನೆದುರಿಸಿ ನಾವು ಗೆಲ್ಲುವುದು ಕಷ್ಟ. ಆದ್ದರಿಂದ ನಮ್ಮ ಚತುರಂಗಬಲದೊಡನೆ ಮೊದಲು ವೈಶಾಲಿಗೆ ಮುತ್ತಿಗೆ ಹಾಕಿ ಯೂಗಿಯನ್ನು ಯುದ್ಧದಲ್ಲಿ ತೊಡಗಿಸಬೇಕು. ಅದೇ ಸಮಯದಲ್ಲಿ ಬೇರೆ ದಂಡನ್ನು ತೆಗೆದುಕೊಂಡು ಉದಯನನ ಮೇಲೆ ನಡೆಯಬೇಕು. ತನ್ನ ಅಪ್ಪಣೆ ನಡೆಸುತ್ತಿದ್ದ ದೇವಗಜ ಅಗಲಿ ಹೋಗಿರುವುದರಿಂದ ಅವನು ದುಃಖಿತನಾಗಿ ಈಗ ವೀಣೆ ಹಿಡಿದು ಕಾಡು ಕಾಡು ಅಲೆಯುತ್ತಿದ್ದಾನೆ. ನಾವು ಮಾಯದ ಆನೆಯೊಂದನ್ನು ನಿರ್ಮಿಸಿ ಅದರ ಮೂಲಕ ಅವನನ್ನು ಹಿಡಿದು ತರಬಹುದು. ಇದೇ ಸರಿಯಾದ ಉಪಾಯ" ಎಂದನು.

ಪ್ರದ್ಯೋತನನು ಮಂತ್ರಿಯ ಸಲಹೆಯನ್ನು ಒಪ್ಪಿ ತಕ್ಕಂತೆ ಅಪ್ಪಣೆ ಮಾಡಿದನು. ವೈಶಾಲಿಗೆ ಸೇನೆ ಹೊರಟಿತು. ಹಲವರು ಶ್ರೇಷ್ಠ ಶಿಲ್ಪಿಗಳು ಹಗಲೂ ರಾತ್ರಿ ಕೆಲಸಮಾಡಿ ದೊಡ್ಡ ಆನೆಯೊಂದನ್ನು ನಿರ್ಮಿಸಿದರು. ಆ ಯಂತ್ರದಾನೆ ವರ್ಣವಿನ್ಯಾಸ ಮತ್ತು ಚಲನವಲನಗಳಿಂದ ಉತ್ತಮ

ಲಕ್ಷಣಗಳುಳ್ಳ ಸಹಜವಾದ ಆನೆಯೋ ಎಂಬಂತೆ ಕಾಣುತ್ತಿತ್ತು. ಅದರ ಹೊಟ್ಟೆಯೊಳಗೆ ತೊಂಬತ್ತಾರು ಮಂದಿ ಯುದ್ಧವೀರರು ಅಡಗಿ ಕುಳಿತರು. ಅದರ ಸೊಂಡಿಲಿನಲ್ಲಿಯೂ ಕಾಲುಗಳಲ್ಲಿಯೂ ಆಯುಧಗಳನ್ನು ಅಡಕಿದ್ದರು. ಶಾಲಂಕಾಯನು ಈ ಮಾಯಾಗಜವನ್ನು ಹಿಂಬಾಲಿಸಿ ದೊಡ್ಡ ದಂಡಿನೊಡನೆ ಕೌಶಾಂಬಿಗೆ ಅಭಿಮುಖವಾಗಿ ನಡೆದನು.

## ೭. ಸೆರೆಮನೆ

ನೀಲಪರ್ವತವನ್ನು ಹೋಲುವ ಯಂತ್ರದಾನೆ ಹಲವು ಪಿಡಿಗಳು ತನ್ನನ್ನು ಸುತ್ತುವರಿದು ಬರುತ್ತಿರಲು ಮೇಘದಂತೆ ಘೀಳಿಡುತ್ತ ಗಡಿನಾಡಿನ ದಟ್ಟದಡವಿಯಲ್ಲಿ ಸುತ್ತಾಡುತ್ತಿತ್ತು. ಅದನ್ನು ಕಂಡ ಬೇಡರು ಉದಯನನಿಗೆ ಸುದ್ದಿ ತಿಳಿಸಿದರು. ಅವರು ಹೇಳಿದ ಲಕ್ಷಣಗಳಿಂದ ಅದು ತನ್ನನ್ನು ಅಗಲಿ ಹೋಗಿದ್ದ ದೈವಿಕ ಆನೆಯೆಂದೇ ನೆನೆದು ಉದಯನು ಹಿಗ್ಗಿದನು. ಬೇಡರಿಗೆ ಬೇಡಿದ ಬಹುಮಾನ ಕೊಟ್ಟು ಕೂಡಲೆ ಆ ಕಾಡಿಗೆ ಪ್ರಯಾಣ ಮಾಡಿದನು. ಘೋಷವತಿಯನ್ನು ಕೈಯಲ್ಲಿ ಹಿಡಿದು ಅಡವಿಯೊಳಕ್ಕೆ ನುಗ್ಗಿದನು.

ಹಗೆಪಡೆ ಬರುವುದೆಂದು ಹಕ್ಕಿ ಶಕುನ ನುಡಿಯಿತು. ಇನ್ನೂ ಹಲವು ದುಶ್ಶಕುನಗಳಾದವು. ಜೊತೆಯಲ್ಲಿದ್ದ ವಸಂತಕನು ಇನ್ನು ಮುಂದೆ ಹೋಗಲಾಗದೆಂದು ತಡೆದನು. ಆದರೆ ದೊರೆ ಕೇಳಲಿಲ್ಲ. ಬಿರ್ರನೆ ಕಾಡಿನೊಳ ಹೊಕ್ಕು ನಡೆದನು. ದೂರದಲ್ಲಿ ಆನೆ ಕಾಣಿಸಿಕೊಂಡಿತು. ಕೂಡಲೆ ತನ್ನೊಡನೆ ಬಂದ ಸೈನಿಕರನ್ನು ಅಲ್ಲಿಯೇ ನಿಲ್ಲಿಸಿ ತಾನು ಮಟ್ಟಗೆ ಅದರಹತ್ತಿರ ಹೋಗಿ ಇನಿಯ ರಾಗವೊಂದನ್ನು ಬಾಜಿಸತೊಡಗಿದನು.

ಆ ಆನೆ ವೀಣೆಯ ಇನಿದನಿಗೆ ಸೋತಂತೆ ತೋರಿತು. ಇವನ ಕಡೆ ತಿರುಗಿ ಮೆಲ್ಲಮೆಲ್ಲನೆ ಹತ್ತಿರ ಬರಲು ಮೊದಲು ಮಾಡಿತು. ತನ್ನ ಒಲವಿನ ಆನೆ ಮತ್ತೆ ಸಿಕ್ಕಿತೆಂಬ ಸಂಭ್ರಮದಲ್ಲಿ ಮೈಮರೆತು ಉದಯನನು ಒಂದೇ ಮನಸ್ಸಿನಿಂದ ವೀಣೆ ಬಾಜಿಸುತ್ತ ನಿಂತುಬಿಟ್ಟನು.

ಆಗ ಆನೆಯೊಳಗೆ ಅಡಗಿದ್ದ ದಂಡಾಳುಗಳು ಅದರ ಯಂತ್ರಗಳನ್ನು ಕಳಚಿ ತಟ್ಟನೆ ಹೊರಕ್ಕೆ ದುಮುಕಿದರು. ಆಯುಧಗಳನ್ನು ಹಿರಿದು ಒಟ್ಟಿಗೆಯೇ ಉದಯನನ ಮೇಲೆ ಕವಿದು ಬಂದರು. ಈ ಆಕಸ್ಮಿಕ ಘಟನೆಯಿಂದ ಅವನು ಕ್ಷಣಮಾತ್ರ ಸ್ತಂಭಿತನಾಗಿದ್ದು ಒಡನೆಯೆ, "ಇದು ಬಹು ಸಣ್ಣವರ ಕೆಲಸ" ಎಂದು ನೆನೆದು ಕಿರುನಗೆ ನಗುತ್ತ ಗಂಭೀರವಾಗಿ ನಿಂತನು.

ಐನೂರು ವೀರರೊಡನೆ ಹಿಂದೆ ನಿಂತಿದ್ದ ವಸಂತಕನು ಮಿಂಚಿನಂತೆ ನುಗ್ಗಿ ಬಂದು ಆ ತೊಂಬತ್ತಾರು ಮಂದಿಯನ್ನೂ ಕತ್ತರಿಸಿ ಕೆಡವಿದನು. ಅಷ್ಟರಲ್ಲಿ ಆನೆಯ ಕಾಪಿನ ದಂಡು ಬಂದು ಮುತ್ತಿತು. ಉದಯನ ಕತ್ತಿ ಹಿರಿದು ಕದನಕ್ಕಿಳಿದನು. ಶಾಲಂಕಾಯನನ್ನೇ ಎದುರಿಸಿ ಕಾದಿ ಅವನನ್ನು ಸೋಲಿಸಿದನು. ಅವನನ್ನು ಕೊಲ್ಲಲೆಂದು ಕತ್ತಿಯೆತ್ತಿ, ಆ ಕೂಡಲೆ, 'ಮಂತ್ರಿಯನ್ನು ಕೊಲ್ಲಲಾಗದು' ಎಂಬ ಶಾಸ್ತ್ರವಿಧಿಯನ್ನು ನೆನೆದು ಅವನನ್ನು ಬಿಟ್ಟುಬಿಟ್ಟನು.

ಉದಯನನ ಪರಾಕ್ರಮಕ್ಕೆ ಚಕ್ರವರ್ತಿಯ ದೊಡ್ಡ ದಂಡೂ ತತ್ತರಿಸಿತು. ಹಲವು ಆನೆಗಳನ್ನು ಎದುರಿಸಿ ಹೋರಾಡುತ್ತಿದ್ದಾಗ ಒಂದು ಆನೆಯ ಕೊಂಬಿನ ಮೇಲೆ ಹೊಡೆದು ಉದಯನನ ಕತ್ತಿ ಮುರಿದುಹೋಯಿತು. ಬರಿಗೈಯಲ್ಲಿ ಒಂಟಿಯಾಗಿ ನಿಂತ ಆ ವೀರನನ್ನು ಹಿಡಿಯಲು ಶಾಲಂಕಾಯನ ಮೊದಲಾದವರೆಲ್ಲ ಸುತ್ತಿಕೊಂಡರು.

ಆಗ ಉದಯನನು ನಡೆದದ್ದನ್ನು ಸಂಕ್ಷೇಪವಾಗಿ ಓಲೆಯಲ್ಲಿ ಬರೆದು ಅದನ್ನು ಯೋಗಿಗೆ ತಲುಪಿಸುವಂತೆ ವಸಂತಕನ ಕೈಗೆ ಕೊಟ್ಟು ಕಳಿಸಿದನು. ಆ ಬಳಿಕ ತಾನು ಶತ್ರುಗಳಿಗೆ ವಶವಾದನು. ಮದ್ದಾನೆಯೊಂದನ್ನು ತಾವರೆ ದಂಟಿನಲ್ಲಿ ಕಟ್ಟಿಹಾಕಿದಂತೆ ಶಾಲಂಕಾಯನು ತನ್ನ ಉತ್ತರೀಯದಿಂದ ಉದಯನನನ್ನು ಕಟ್ಟಿದನು. ಆ ಮೇಲೆ ಅವನನ್ನು ಒಂದು ರಥದ ಮೇಲೇರಿಸಿಕೊಂಡು ದಂಡಿನೊಡನೆ ಗೆಲುವಿನ ಸಂಭ್ರಮದಿಂದ ಉಜ್ಜಯಿನಿಗೆ ಹಿಂದಿರುಗಿದನು.

ಉದಯನನನ್ನು ಹಿಡಿತಂದ ಸಂಗತಿಯನ್ನು ಪ್ರದ್ಯೋತನನಿಗೆ ಅರಿಕೆ ಮಾಡಿದರು. ಅವನನ್ನು ಸೆರೆಯಲ್ಲಿಡುವಂತೆ ಚಕ್ರವರ್ತಿಯ ಅಪ್ಪಣೆಯಾಯಿತು.

ಕಾಲಿಗೆ ಸಂಕೋಲೆ ತೊಡಿಸಿ ಕತ್ತಲೆ ತುಂಬಿದ ದೊಡ್ಡ ಸೆರೆಮನೆಯಲ್ಲಿ ಅವನನ್ನಿಟ್ಟರು. ಪ್ರೈಮನಗಳೆರಡಕ್ಕೂ ನೋವುಂಟುಮಾಡಿದರು.

## ೮. ಯೂಗಿಯ ಪ್ರತಿಜ್ಞೆ

ವಸಂತಕನು ವೇಗವಾಗಿ ನಡೆದು ವೈಶಾಲಿಯನ್ನು ಸೇರಿದನು. ಅದರ ಹೊರವಳಯದಲ್ಲಿ ದೊಡ್ಡ ಯುದ್ಧ ನಡೆಸುತ್ತಿದ್ದ ಯೂಗಿಯನ್ನು ರಹಸ್ಯವಾಗಿ ಕಂಡು ಓಲೆಯನ್ನು ಕೊಟ್ಟು ನಡೆದದ್ದನ್ನೆಲ್ಲ ತಿಳಿಸಿದನು. ಯೂಗಿ ತನ್ನ ನಾಯಕನು ಸಿಕ್ಕಿಕೊಂಡ ಆ ಕಷ್ಟಸ್ಥಿತಿಗಾಗಿ ಬಹಳ ಸಂಕಟಪಟ್ಟನು. ಸ್ವಲ್ಪದಲ್ಲಿಯೆ ದುಃಖವನ್ನು ಸಮಾಧಾನಮಾಡಿಕೊಂಡು, ಮುಂದಿನ ಕಾರ್ಯ ರೀತಿಯನ್ನು ಆಲೋಚಿಸತೊಡಗಿದನು.

ಪ್ರದ್ಯೋತನ ವಂಚನೆಯನ್ನು ನೆನೆದು ಸಿಟ್ಟುಗೊಂಡನು. 'ಕಬ್ಬಿಣ ವನ್ನು ಇಲಿ ನುಂಗಿತು' ಎಂದದ್ದಕ್ಕೆ 'ಕೂಸನ್ನು ಹದ್ದು ಎತ್ತಿಕೊಂಡು ಹೋಯಿತು' ಎಂದು ಮರುನುಡಿದ ಹಾಗೆ, ವಂಚನೆ ಮಾಡಿದವನನ್ನು ವಂಚನೆಯಿಂದಲೇ ಗೆಲ್ಲಬೇಕು—ಎಂದು ನಿಶ್ಚಯಿಸಿದನು. ಬಳಿಕ ಅಲ್ಲಿ ಬಳಸಿ ನಿಂತ ಗೆಳೆಯರಿಗೆ ತನ್ನ ನಿರ್ಧಾರವನ್ನು ತಿಳಿಸಿದನು.

'ಕಳ್ಳಾನೆಯಿಂದ ಮೈಮರಸಿ ಪ್ರದ್ಯೋತನು ನಮ್ಮರಸನನ್ನು ಹಿಡಿದೊಯ್ದಿದ್ದಾನೆ. ನಾನು ಕೂಡ ಆನೆಯಿಂದಲೇ ಅವನ ನಗರವನ್ನು ಧ್ವಂಸ ಮಾಡಿಸಿ ಉದಯನನ್ನು ಬಿಡಿಸಿಕೊಂಡು ಬರುತ್ತೇನೆ. ಇದೂ ಅಲ್ಲದೆ ಪ್ರದ್ಯೋತನನು ಅರಿಯದಂತೆಯೇ ಅವನ ಮಗಳು ವಾಸವದತ್ತೆಯನ್ನು ಉದಯನನು ಕರೆದುಕೊಂಡು ಬರುವಂತೆ ಮಾಡಿ ಅವಳನ್ನು ಅವನಿಗೆ ಮದುವೆ ಮಾಡಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು.

ವೈಶಾಲೀ ನಗರದ ಕಾಪಿಗೆ ತನ್ನ ಪರಿವಾರದವರನ್ನು ನಿಯಮಿಸಿದನು. ಕೌಶಾಂಬೀ ನಗರವನ್ನು ಎಚ್ಚರಿಕೆಯಿಂದ ಕಾಯುತ್ತಿರುವಂತೆ ಪಿಂಗಲ ಕಟಕರಿಗೆ ಹೇಳಿ ಕಳಿಸಿದನು. ಅವಂತಿ ನಾಡಿನ ಎಲ್ಲೆಯ ಹೊರಗಿರುವ

ಪ್ರಸ್ಥಕ ನಗರದಲ್ಲಿ ಉದಯನನ ಪರಿವಾರದವರನ್ನು ಇರಿಸಿ, ಅವರಿಗೆ ರಕ್ಷಕನನ್ನಾಗಿ ವೃಷಭಕನನ್ನು ಕಳಿಸಿದನು. ಜಯಂತೀ ನಗರದಲ್ಲಿ ರುಮಣ್ವಂತನನ್ನು ನಿಲ್ಲಿಸಿದನು. ಮುಂದೆ ಆಗಾಗ ನಡಿಸಬೇಕಾದ ಕಾರ್ಯಗಳಿಗೆಲ್ಲ ತಕ್ಕ ಏರ್ಪಾಡು ಮಾಡಿದನು.

ತಾನು ಯಾರಿಗೂ ತಿಳಿಯದ ಹಾಗೆ ಅಡಗಿ ನಿಂತನು. ಪರಿವಾರದವರು ಯಾವುದೋ ಒಂದು ಹೆಣಕ್ಕೆ ಯೌಗಿಯ ಉಡಿಗೆತೊಡಿಗೆಗಳನ್ನಿಟ್ಟು ಅಲಂಕರಿಸಿ ಬಹು ದುಃಖದಿಂದ ಗೋಳಾಡುತ್ತ ಸುಟ್ಟುಬಿಟ್ಟರು. ಆ ಮೇಲೆ 'ಉದಯನನ ಅಗಲಿಕೆಯನ್ನು ತಾಳಲಾರದೆ ಯೌಗಿ ಸತ್ತುಹೋದನು' ಎಂದು ಎಲ್ಲೆಲ್ಲೂ ಸುದ್ದಿ ಹರಡಿತು.

ಯೌಗಿ ಸತ್ತನೆಂದು ಕೇಳಿ ಪ್ರದ್ಯೋತನನಿಗೆ ಬಹಳ ಸಂತೋಷವಾಯಿತು. ಯುದ್ಧಕ್ಕೆ ಹೋದ ಸೇನೆಯನ್ನು ವೈಶಾಲಿಯಿಂದ ಹಿಂದಕ್ಕೆ ಕರಸಿಕೊಂಡನು. ಉದಯನನ ನಾಡಿನಲ್ಲಿ ಕೆಲವು ಪ್ರದೇಶಗಳನ್ನು ಬಲ್ಮೆಯಿಂದ ವಶಪಡಿಸಿಕೊಂಡು ನಿಶ್ಚಿಂತನಾಗಿದ್ದುಬಿಟ್ಟನು.

## ೯. ವೇಷಗಾರರು

ಯೌಗಿ ಮಾರುವೇಷ ತೊಟ್ಟು, ತನ್ನಂತೆಯೇ ಬೇರೆ ಬೇರೆ ವೇಷ ಧರಿಸಿದ ಹಲವು ವೀರರೊಡನೆಯೂ ವಸಂತಕ ಮೊದಲಾದ ಒಡನಾಡಿಗಳೊಡನೆಯೂ ಉಜ್ಜಯಿನಿಗೆ ಹೋಗಿ ಸೇರಿದನು. ಊರ ಹೊರಗೆ ಯಾರೂ ಇಲ್ಲದ ಹಾಳು ಮನೆಯೊಂದರಲ್ಲಿ ತಂಗಿದನು. ವಸಂತಕ ಮೊದಲಾದ ಕೆಲವರು ಗೆಳೆಯರೊಡನೆ ಆಲೋಚಿಸಿ, ಅವರಿಗೆ ಬೇರೆ ಬೇರೆ ವೇಷಭಾಷೆಗಳನ್ನು ಗೊತ್ತುಪಡಿಸಿ, ಅಂಗಡಿ ಬೀದಿ ಮೊದಲಾದ ಕಡೆಗಳಲ್ಲಿ ವ್ಯಾಪಾರಾದಿ ವೃತ್ತಿಗಳನ್ನು ನಡೆಸುತ್ತಿರುವಂತೆ ಅವರನ್ನು ಕಳಿಸಿದನು. ವಸಂತಕನು ವಿದ್ಯಾರ್ಥಿಯಂತೆ ಹೋಗಿ ಪ್ರದ್ಯೋತನನ ಕುಮಾರರೊಡನೆ ಓದುತ್ತ ಅವರು ಹೇಳಿದ ಕೆಲಸ ಮಾಡಿಕೊಂಡಿದ್ದನು.

ಯೂಗಿ ಕಳಿಸಿದ ಗೂನರೂ ಗುಜ್ಜಾರಿಗಳೂ ಒಳನಗರದಲ್ಲೂ ಹೊರ ನಗರದಲ್ಲೂ ನೆರೆಯೂರುಗಳಲ್ಲಿಯೂ ಸುಳಿದಾಡುತ್ತ, ಅಲ್ಲಲ್ಲಿಗೆ ತಕ್ಕ ಕೆಲಸ ಗಳನ್ನು ಸಂಪಾದಿಸಿಕೊಂಡು, ಹೆರರರಿಯದಂತೆ ಆಗಾಗ ಯೂಗಿಗೆ ಸಮಾ ಚಾರ ತಿಳಿಸುತ್ತಿದ್ದರು. ವೀರರಲ್ಲಿ ಕೆಲವರು ಮೂಕರಾಗಿಯೂ ಕೆಲವರು ಕಿವುಡರಾಗಿಯೂ ನಟಿಸುತ್ತ, ಅರಮನೆ ಮುಂತಾದ ಆಯಕಟ್ಟಿನ ಸ್ಥಳಗಳಲ್ಲಿ ತಕ್ಕತಕ್ಕ ಕೆಲಸಗಳನ್ನು ಸಂಪಾದಿಸಿಕೊಂಡರು. ಚೆನ್ನಾಗಿ ಕೆಲಸ ಮಾಡಿ ದಣಿಗಳ ಮೆಚ್ಚಿಕೆ ಪಡೆದು ಅಲ್ಲಲ್ಲಿ ನಡೆಯುವ ಸಂಗತಿಗಳನ್ನೂ ರಹಸ್ಯಾ ಲೋಚನೆಗಳನ್ನೂ ತಿಳಿದು ಬಂದು ಹೇಳುತ್ತಿದ್ದರು. ಯೂಗಿ ಆ ಸುದ್ದಿಗಳ ನ್ನರಿತು, ಮುಂದೆ ಮಾಡಬೇಕಾದ ಕಾರ್ಯಗಳನ್ನು ಅವರಿಗೆ ಸೂಚಿಸುತ್ತಿದ್ದನು. ಇಂಥ ಸಂದರ್ಭಗಳಲ್ಲಿ ಅಗಲಿದವರು ಒಟ್ಟು ಸೇರುವುದಕ್ಕೂ ಸೇರಿದವರು ಅಗಲಿ ಚೆದರುವುದಕ್ಕೂ ಸರಿಯಾದ ಸಂಕೇತಗಳು ಗೊತ್ತಾಗಿದ್ದವು.

ಇತ್ತ ಯೂಗಿ ಈ ಸಂಚಿನಲ್ಲಿ ತೊಡಗಿದ್ದಾಗ ಅತ್ತ ಪಾಂಚಾಲದೇಶದ ಅರಸು ಅರುಣಿಯೆಂಬುವನು ವತ್ಸರಾಜ್ಯದ ಮೇಲೆ ದಂಡೆತ್ತಿ ಬಂದು ಕೌಶಾಂಬಿ ಯನ್ನು ಮುತ್ತಿ ವಶಪಡಿಸಿಕೊಂಡನು. ಚೇದಿಯ ಅರಸರಿಗೂ ಪಾಂಚಾಲ ರಾಜರಿಗೂ ಕುಲವೈರವಿತ್ತು. ಈಗ ಚೇದಿರಾಜರ ಉತ್ತರಾಧಿಕಾರ ಪಡೆದ ಉದಯನನ ಮೇಲೆ ಆರುಣಿಯ ವೈರ ಹರಿಯಿತು. ಪಿಂಗಲ ಕಟಕರು ಅವನನ್ನೆದುರಿಸಲಾರದೆ ಅಂಜಿ ಬೇರೆಡೆಗೆ ಹೋಗಿ ಮರೆಸಿಕೊಂಡರು. ಆರುಣಿ ಕೌಶಾಂಬಿಯನ್ನೇ ರಾಜಧಾನಿಯಾಗಿ ಮಾಡಿಕೊಂಡು ಆಳತೊಡಗಿದನು.

ಒಂದು ದಿನ ರೋಗಿಯಂತೆಯೂ ದೈವಾವೇಶ ಬಂದವನಂತೆಯೂ ಕಾಣುತ್ತಿದ್ದ ಒಬ್ಬ ಮನುಷ್ಯನು ನೀರ ಕರಗವೊಂದನ್ನು ತಲೆಯಮೇಲೆ ಹೊತ್ತು ಕೈ ತಟ್ಟುತ್ತ ಹಾಡಿಕೊಂಡು ಉಜ್ಜಯಿನಿಯ ಬೀದಿಯಲ್ಲಿ ಹೊರ ಟನು. ಅವನ ಸುತ್ತಮುತ್ತ ಜನ ಜಾತ್ರೆ ನೆರೆಯಿತು. ಕರಗ ಹೊತ್ತವನು ಹಲವು ಬಗೆಯಲ್ಲಿ ಹಾಡುತ್ತಿದ್ದನು. ನಡು ನಡುವೆ, "ದೇವಲೋಕದಿಂದ ದೇವತೆಯೊಬ್ಬನು ಬಂದು ಈ ನಗರದಲ್ಲಿದ್ದಾನೆ. ಅವನು ನನ್ನ ನಾಯಕ. ನಾನೂ ಅವನ ಹಿಂದೆ ಬಂದೆ" ಎಂದೂ, 'ಈ ಊರ ದೊರೆ ಐದು ಹೆಡೆಯ ಸರ್ಪವೊಂದನ್ನು ತಂದು ಸೆರೆ ಹಾಕಿದ್ದಾನೆ. ಆ ಸೆರೆಮನೆ ಎಲ್ಲಿದೆ ?' ಎಂದೂ

ಅರಿವೂ ಮರುಳೂ ಆದ ಮಾತುಗಳನ್ನಾಡುತ್ತ ಕುಣಿಯುತ್ತಿದ್ದನು. ನೆರೆದ ಜನ ಆಶ್ಚರ್ಯ ಭಯುಕನಿಕರಗಳಿಂದ ನೋಡುತ್ತಿದ್ದರು.

ಈ ಮೆರವಣಿಗೆ ಎಲ್ಲೆಲ್ಲೋ ಸುತ್ತಿಕೊಂಡು ಉದಯುನನಿದ್ದ ಸೆರೆ ಮನೆಯ ಬಳಿ ಬಂತು. ಆಗ ಕರಗದವನು ಒಂದು ವಿಚಿತ್ರವಾದ ಹಾಡನ್ನು ಹಾಡಿದನು. ಅದನ್ನು ಕೇಳಿ ಉದಯುನ ಒಳಗಿನಿಂದ ಕೊಳಲೂದಿದನು. ಸೆರೆಗಾವಲಿನವರೊಡನೆ ಮಾತನಾಡುತ್ತಾ ವಿನೋದ ನೋಡುವುದಕ್ಕೆ ಅವರ ಜೊತೆಯಲ್ಲೇ ಹೊರಕ್ಕೆ ಬಂದನು. ಯೂಗಿಯೂ ಅವನೊಡನೆ ಬಂದಿದ್ದ ವೀರರೂ ಆರೋಗ್ಯಶಾಲಿಯಾಗಿದ್ದ ತಮ್ಮರಸನನ್ನು ಕಂಡು ಸಮಾಧಾನ ಗೊಂಡರು. ತನ್ನ ಪ್ರಾಣಮಿತ್ರನನ್ನು ಗುರುತಿಸಿ ಉದಯುನನೂ ಆನಂದ ಹೊಂದಿದನು. ಬಳಿಕ ಯೂಗಿ ಕರಗವನ್ನೆಸೆದು ಹುಚ್ಚನಂತೆ ಕುಣಿಯುತ್ತ ಎತ್ತಲೋ ಓಡಿದನು.

ಮೂರು ನಾಲ್ಕು ದಿನ ಕಳೆದ ಮೇಲೆ ಚುರುಕುಬುದ್ಧಿಯ ಕಾವಲು ಗಾರನೊಬ್ಬನು ಅರಸನನ್ನು ಕಂಡು 'ಮಹಾಪ್ರಭೂ, ಕೆಲವು ದಿನಗಳಿಂದ ವಿಚಿತ್ರವೇಷದ ಒಬ್ಬ ರೋಗಿ ಹಾಡುತ್ತ ಕುಣಿಯುತ್ತ ಅರ್ಥವಿಲ್ಲದ ಮಾತಾಡುತ್ತ ಬೀದಿಯಲ್ಲಿ ಬರುತ್ತಾನೆ. ಅವನ ಹಾಡು ಕೇಳಿದಾಗಲೆಲ್ಲ ಉದಯುನ ಕೊಳಲೂದುತ್ತಾನೆ. ಪರಾಂಬರಿಸಬೇಕು' ಎಂದು ವಿಜ್ಞಾಪಿಸಿ ದನು. ಪ್ರದ್ಯೋತನನು ಮಂತ್ರಿಗಳ ಮುಖ ನೋಡಿದನು. ಶಾಲಂಕಾಯನು "ನಾಡ ಸುದ್ದಿಯಂತೆ ಯೂಗಿ ಸತ್ತಿರಲಾರ. ಅವನೇ ಇವನೆಂದು ನನ್ನ ಸಂಶಯ. ಅವನೆದೆಯಲ್ಲಿ ಆನೆ ತಿವಿದ ಗಾಯವೊಂದಿದೆ. ಪರೀಕ್ಷಿಸಿ ನೋಡಬೇಕು" ಎಂದನು.

ಆ ಆಲೋಚನೆ ನಡೆದಾಗ ಅಲ್ಲಿದ್ದ ಕಿವುಡ ಸೇವಕನಿಂದ ಯೂಗಿಗೆ ಸುದ್ದಿ ತಿಳಿಯಿತು. ಅಂದಿನಿಂದ ಹುಚ್ಚನ ಮೈಮೇಲೆ ಕಂತೆಬೊಂತೆಗಳ ಅಲಂಕಾರ ಹೆಚ್ಚಾಯಿತು.

## ೧೦. ಆನೆಯ ಆಗ್ರಹ

ಸುಮಾರು ಒಂದು ತಿಂಗಳು ಕಳೆದಿರಬಹುದು. ಆಗ ಒಂದು ದಿನ ಹುಚ್ಚನು ನಡುರಾತ್ರಿಯಲ್ಲಿ ಯಾರೂ ಅರಿಯದಂತೆ ಗಜಶಾಲೆಗೆ ನುಸುಳಿ

ಹೋದನು. ನಳಗಿರಿಯ ಬಳಿ ಸೇರಿ ಅದಕ್ಕೆ ಅಗಿಲು ಹೊಗೆ ಹಾಕಿ ಒಂದು ಬಗೆಯ ಔಷಧಿಯನ್ನು ತಿನ್ನಿಸಿದನು. ಆಮೇಲೆ ಉಚ್ಚಾಟನಮಂತ್ರ ವೊಂದನ್ನು ಅದರ ಕಿವಿಯಲ್ಲಿ ಉಚ್ಚರಿಸಿ, 'ಈ ನಗರವನ್ನು ಹಾಳುಮಾಡಿ, ಅರಸನನ್ನು ಕಳವಳಪಡಿಸಿ, ಉದಯನನ್ನು ಸೆರೆಯಿಂದ ಬಿಡಿಸುವುದು ನಿನ್ನ ಕರ್ತವ್ಯ' ಎಂದು ಹೇಳಿದನು.

ಒಡನೆಯೇ ಆನೆಗೆ ಕಡುಕೋಪವೇರಿತು. ಮದವುಕ್ಕಿ ಕೆರಳಿ ಅದು ಕಟ್ಟುಗಂಬವನ್ನು ಮುರಿದು ತನ್ನನ್ನು ಬಿಗಿದಿದ್ದ ಸರಪಣಿಯನ್ನು ಕಿತ್ತೆಸೆದು ದೊಡ್ಡದಾಗಿ ಘೀಂಕಾರಮಾಡಿ ಸುತ್ತಿ ಸುತ್ತಿ ಓಡಿ ಓಡಿ ಊರನ್ನು ಧ್ವಂಸ ಮಾಡತೊಡಗಿತು. ಪಳಗಿದ ಮಾವುತರು ಅದನ್ನು ಅಡಗಿಸಲು ಸಾಧ್ಯವಾದಷ್ಟೂ ಪ್ರಯತ್ನ ಮಾಡಿದರು. ಆನೆ ಅಡಗಲಿಲ್ಲ, ಮದ ಕೆರಳಿ ಮಾವಟಿಗರನ್ನೇ ಎತ್ತಿ ಎಸೆಯಿತು, ತುಳಿದೊಸೆಯಿತು. ಬೀದಿಗಳಲ್ಲಿ ನುಗ್ಗಿ ಜನರನ್ನು ತುಳಿದು ಕೊಲ್ಲತೊಡಗಿತು; ಮನೆಗಳನ್ನೂ ಗೋಪುರಗಳನ್ನೂ ಕೊಂಬುಗಳಿಂದ ತಿವಿದುರುಳಿಸತೊಡಗಿತು. ನಗರವೆಲ್ಲ ನಡುಗಿತು.

ಈ ಸುದ್ದಿಯನ್ನು ಕೇಳಿ,

'ನಾವೆ ಬೋರಲು ಬೀಳೆ ನಾವಿಕನ ಹಾಗೆ
ಮಿಗಿಲು ಕಳವಳದಿಂದ ಅಸಸ ಮನಕಲಕಿ'

ಅರಮನೆಯ ಮಾಳಿಗೆಯ ಮೇಲ್ಕೋಣೆಯಲ್ಲಿ ಹತ್ತಿ ನಿಂತು ನೋಡಿದನು. ಆನೆ ಮಾಡುತ್ತಿರುವ ಹಾವಳಿಯನ್ನು ಕಣ್ಣಾರ ಕಂಡು, ಜನರ ಚೀತ್ಕಾರವನ್ನು ಕಿವಿಯಾರ ಕೇಳಿ, ಮನನೊಂದು ಅದನ್ನಡಗಿಸುವುದಕ್ಕೆ ನೂರಾರು ವೀರರನ್ನು ಕಳಿಸಿದನು. ನಳಗಿರಿ ಮೊದಲೇ ಯಾರನ್ನೂ ಲೆಕ್ಕಿಸದ ಮಹಾ ಬಲಶಾಲಿ. ಈಗ ಮದ ಬೇರೆ ಕೆರಳಿರುವಾಗ ದಂಡಾಳುಗಳೊಂದು ಗಣನೆಯೇ, ಅದಕ್ಕೆ ? ಅವರನ್ನು ಕೊಂದು ಕೇರಿ ಕೇರಿಗಳನ್ನೇ ನೆಲಸಮ ಮಾಡುತ್ತಾ ನಡೆದು ಹಲವು ಉದ್ಯಾನಗಳನ್ನು ಹಾಳುಮಾಡಿತು. ನಗರದ ನೆಲೆ ಕಲಕಿತು.

ಈ ಆಪತ್ತಿನಿಂದ ಪಾರುಗುವುದು ಹೇಗೆಂದು ಚಿಂತಿಸುತ್ತ ಕಳವಳದ ಕಡಲಿನಲ್ಲಿ ಮುಳುಗಿ ಪ್ರದ್ಯೋತನನು ಮಂತ್ರಿಗಳೊಡನೆ ಆಲೋಚಿಸಿದನು. ಯಾರಿಗೂ ಸಮರ್ಪಕವಾದ ಉಪಾಯ ಹೊಳೆಯಲಿಲ್ಲ.

"ಸೆರೆಯಲ್ಲಿರುವ ಉದಯನನೇ ಇದಕ್ಕೆ ತಕ್ಕ ಉಪಾಯ. ಅವನು ವೀಣೆ ಬಾರಿಸಿ ಇದನ್ನು ಅಡಗಿಸಬಲ್ಲನು" ಎಂದು ಶಾಲಂಕಾಯನೆಂದನು.

ಅರಸ ಅಳುಕಿದನು. "ಎದುರಿಸಿ ಹೋರಾಡಿ ಗೆಲ್ಲಲಾರದೆ ಮಾಯದಾನೆಯಿಂದ ವಂಚಿಸಿ ತಂದು ಸೆರೆಯಿಟ್ಟಿದ್ದಲ್ಲದೆ ಮದಿಸಿದ ಆನೆಯ ಮುಂದೂ ದೂಡಿಸಿದರು—ಎಂದು ಕೆಟ್ಟ ಹೆಸರು ಹೊರಬೇಕಾಗುತ್ತದೆ. ನಾನೊಪ್ಪಲಾರೆ" ಎಂದನು.

"ಅವನಿಗೆ ಭಯವಿಲ್ಲ. ಇಂದ್ರನ ಆನೆಯಾದರೂ ಅವನಿಗೆ ಅಡಗಿ ನಡೆಯುವುದೇ ಹೊರತು ಮತ್ತೇನೂ ಮಾಡಲಾರದು. ಅಲ್ಲದೆ, ಈಗ ಅವನನ್ನು ನಳಗಿರಿಯ ಮುಂದೆ ಕಳಿಸಲು ಅಳುಕಿ ಹಿಂಜರಿದೆವಾದರೆ ನಗರ ನಾಶವಾಗುವುದು ನಿಶ್ಚಯ" ಎಂದು ಮಂತ್ರಿ ಮನದಟ್ಟುವಂತೆ ನುಡಿದನು.

"ನೀನೇ ಹೋಗಿ ಉದಯನನನ್ನು ಕರೆದುಕೊಂಡು ಬಾ."

"ವಂಚಿಸಿ ಹಿಡಿತಂದೆನಾದ್ದರಿಂದ ಈಗ ಅವನೆದುರಿಗೆ ಹೋಗಿ ಕೇಳಲು ನನಗೆ ನಾಚಿಕೆ."

ಬಳಿಕ ಶ್ವೇತನೆಂಬ ಮಂತ್ರಿಯನ್ನು ಸಂಧಾನಕ್ಕೆ ಬಿಟ್ಟರು. ಅವನು ಹೋಗಿ ಉದಯನನನ್ನು ಕಂಡು ಕೊಂಡಾಡಿ, "ಅರಸರ ಕಟ್ಟಳೆಯಂತೆ ಇಲ್ಲಿ ಬಂದೆ. 'ಈಗ ಈ ನಗರಕ್ಕೆ ನಳಗಿರಿಯಿಂದ ಬಂದಿರುವ ದೊಡ್ಡ ಸಂಕಟವನ್ನು ಪರಿಹರಿಸುವುದು ನಿಮ್ಮನ್ನು ಕೂಡಿದ್ದು. ಸೆರೆಯಿಂದ ಬಿಡಿಸಿ ನಿಮ್ಮನ್ನು ಕೌಶಾಂಬಿಗೆ ಕಳಿಸುವುದು ನಮ್ಮ ಕರ್ತವ್ಯ.' ಎಂದು ಅವರು ತಿಳಿಸಹೇಳಿದರು. ಆದ್ದರಿಂದ ಕೃಪೆಮಾಡಬೇಕು. ಮನಸ್ಸಿನಲ್ಲಿ ಏನೊಂದನ್ನೂ ಇಟ್ಟುಕೊಳ್ಳಬಾರದು' ಎಂದು ನಮಸ್ಕಾರ ಮಾಡಿದನು. ಹಲವು ರೀತಿಯಲ್ಲಿ ಹೇಳಿ ಒಡಂಬಡಿಸಿದನು.

ಉದಯನನನ್ನು ಶಿಬಿಕೆಯಲ್ಲಿ ಕೂರಿಸಿ ಕರೆತಂದರು. ಅವನನ್ನು ಕಂಡ ನಗರದ ಜನಕ್ಕೆ ಜೀವ ಬಂದಹಾಗಾಯಿತು. ಅಷ್ಟುಹೊತ್ತಿಗೆ ಆನೆ ಊರ ಹೊರವಳಯದಲ್ಲಿ ಅಲೆದಾಡುತ್ತಿತ್ತು. ಹಲವು ಹದ್ದುಗಳು ಮೇಲೆ ಚಕ್ರಾಕಾರವಾಗಿ ಸುತ್ತುತಿದ್ದವು. ಉದಯನಕುಮಾರನು ಶಿಬಿಕೆಯಿಂದಿಳಿದು ನಳಗಿರಿಯ ಮುಂದೆ ನಿಂತನು. ಆನೆ ಕೆಂಗಣ್ಣು ಕೆರಳಿಸಿ ಅವನ ಕಡೆ

ತಿರುಗಿತು. ಅವನು ಮಂತ್ರವನ್ನು ಜಪಿಸಿದೊಡನೆ ಆನೆಯ ಕೋಪ ಆರ ತೊಡಗಿತು. ಕರುಣೆ ಸೂಸುವ ಹಾಡೊಂದನ್ನು ಹಾಡಿ ಘೋಷವತಿಯನ್ನು ಬಾಜಿಸುತ್ತ ಮುಂದೆ ನಡೆದನು.

ವೀಣೆಯ ಇನಿನಾದಕ್ಕೆ ಆನೆ ಸೋಲತೊಡಗಿತು. ಸಿಟ್ಟಾರಿ ಸಂತಸ ದಿಂದ ನಲಿಯುತ್ತಾ ಆಚಾರ್ಯನಿಗೆ ಪಾದಸೇವೆ ಮಾಡುವ ಶಿಷ್ಯನಂತೆ ಅವನ ಬಳಿ ಬಂದು ಪ್ರೀತಿಯಿಂದ ಮಣಿದು ನಮಸ್ಕಾರ ಮಾಡಿತು. ಮಣಿದು ನಿಂತ ಅದರ ದಂತದಮೇಲೆ ಅಡಿಯಿಟ್ಟು ಏರಿ ಉದಯನನು ಅದರ ಹೆಡ ತಲೆಯಮೇಲೆ ಕೂತುಕೊಂಡನು. ಕೂತು ನಡೆಸಲು ಅದು ಸ್ವಲ್ಪವೂ ತುಂಟಾಟ ಮಾಡದೆ ನಗರದ ಬೀದಿಗಳಲ್ಲಿ ವಿಲಾಸದಿಂದ ನಡೆಯಿತು.

ಕಂಡ ಜನಕ್ಕೆ ಬೆರಗಾಯಿತು; ಸಂತೋಷವಾಯಿತು. ''ನೆಲದೊಡೆಯ ಬಾಳ್ಗೆ! ವತ್ಸದೊರೆ ಬಾಳ್ಗೆ! ಈ ನಗರದುರುನೋವ ನೀಗಿಸಿದ ಜಯಶಾಲಿ ಬಾಳ್ಗೆ!' ಎಂದು ಜಯಘೋಷ ಮಾಡುತ್ತ ಜೊತೆಯಲ್ಲಿ ನಡೆದರು. ಬೀದಿ ಬೀದಿಯಲ್ಲೆಲ್ಲ ಆನಂದದಿಂದ ಅವನ ಮೇಲೆ ಹೂವೆರಚಿ ಕೈಮುಗಿದು ಎದುರು ಗೊಂಡು ಹೊಗಳುತ್ತಿದ್ದರು.

## ೧೧. ಸೆರೆಮನೆಯಿಂದ ಮನೆಗೆ

ಪ್ರದ್ಯೋತನ ಚಕ್ರವರ್ತಿ ಅರಮನೆಯ ಮೇಲಿನಿಂದ ನೋಡುತ್ತಿದ್ದವನು ಇದನ್ನೆಲ್ಲಾ ಕಂಡೂ ಕೇಳಿಯೂ ಆನಂದಗೊಂಡನು. ದೇವಿಯರೊಡನೆಯೂ ಪುತ್ರಿಯರೊಡನೆಯೂ ಹುಲಿಮುಖಮಾಡಕ್ಕೆ ಬಂದು, ಉದಯನನನ್ನು ಕಾಣಬಯಸಿ ಹೇಳಿಕಳಿಸಿದನು. ಆ ಬಯಕೆಯನ್ನರಿತ ಉದಯನನು ನಳಗಿರಿ ಯನ್ನು ಅರಮನೆಯ ಮುಂದಕ್ಕೆ ನಡಸಿದನು.

ಬೆಲೆಕಟ್ಟಲಾಗದ ಒಂದು ಹಾರವನ್ನು ಉದಯನನಿಗೆ ಕಳಿಸಿ ಚಕ್ರವರ್ತಿ ತನ್ನ ಮೆಚ್ಚಿಕೆಯನ್ನು ವ್ಯಕ್ತಪಡಿಸಿದನು. ''ನೀನು ಪುಣ್ಯವಂತ; ಪರಿಶುದ್ಧಿ ಪಡೆದ ಕುಲದಲ್ಲಿ ಹುಟ್ಟಿದವನು; ಗುಣಗಡಲು; ಬಹಳ ಪರಾಕ್ರಮಶಾಲಿ, ಮಂತ್ರಸಿದ್ಧಿ ಪಡೆದವನು. ನಿನ್ನ ನೆಲೆಯನ್ನರಿಯದೆ ನಾನು ನಿನಗೆ ಬಹು

ದೊಡ್ಡ ಅಪರಾಧ ಮಾಡಿಬಿಟ್ಟೆ ತಾಳಿಕೊಳ್ಳಬೇಕು" ಎಂದು ಅನುನಯ ನುಡಿದನು. "ನೀನು ಕಲಿತ ವಿದ್ಯೆಗಳು ಯಾವುವು ?" ಎಂದು ಪ್ರಶ್ನೆ ಮಾಡಿದನು. ಉದಯನ ಇಂಥಿಂಥವೆಂದು ವಿವರಿಸಿ ಉತ್ತರ ಕೊಟ್ಟನು.

"ಈ ಎಳವೆಯಲ್ಲಿ ಇಷ್ಟು ವಿದ್ಯೆಗಳು ಇವನಲ್ಲಿ ನೆಲಸಿರುವುದು ಇವನ ಪೂರ್ವಪುಣ್ಯದ ಫಲ!" ಎಂದು ಮನಸ್ಸಿನಲ್ಲಿ ನೆನೆದು ಆಶ್ಚರ್ಯಪಟ್ಟನು. 'ಇಲ್ಲಿ ನಮಗೆ ಸಾಧ್ಯವಿರುವ ಮಟ್ಟಿಗೂ ನಿನ್ನ ಸಂತೋಷಪಡಿಸುತ್ತೇವೆ. ನಿನ್ನನ್ನು ಕೌಶಾಂಬಿ ನಗರಕ್ಕೆ ಕಳಿಸುವವರೆಗೆ ಈ ನಿನ್ನ ತಮ್ಮಂದಿರು ನಿನ್ನನ್ನು ಸೇವಿಸಿಕೊಂಡಿರಲಿ' ಎಂದು ತನ್ನ ಕುಮಾರರನ್ನು ಉದಯನನ ಜೊತೆ ಇರುವಂತೆ ನಿಯಮಿಸಿದನು. ಎಲ್ಲರೂ ಮನಬೆರತು ಮಾತಾಡಿ ಸಂತೋಷಿಸಿದರು.

ಆನೆಯು ನೆಲೆ ಅಷ್ಟು ತಟ್ಟನೆ ಮಾರ್ಪಟ್ಟದ್ದೇಕೆಂದರಿಯಲು ಕುತೂಹಲ ಗೊಂಡು ಉದಯನನನ್ನು ಕೇಳಿದನು. ಉತ್ತರ ಹೇಳಲೆಂದು ಅವನು ಕತ್ತೆತ್ತಿ ನೋಡಿದಾಗ, ಚಕ್ರವರ್ತಿಯ ಹಿಂದೆ ತಾಯ ಬಳಿ ಕುತೂಹಲದಿಂದ ಕಣ್ಣರಳಿಸಿ ನಿಂತಿದ್ದ ವಾಸವದತ್ತೆ ಕಣ್ಣಿಗೆ ಬಿದ್ದಳು. ಅವಳ ದೃಷ್ಟಿಯೂ ಉದಯನಕುಮಾರನ ನೋಟದಲ್ಲಿ ನಾಟಿತು. ಇಬ್ಬರೂ ಒಡನೆಯೇ ಪ್ರೇಮಗೊಂಡರು. ಆ ನೋಟದ ಮೂಲಕವೆ ಒಬ್ಬರ ಮನಸ್ಸಿನಲ್ಲೊಬ್ಬರು ಹೊಕ್ಕು ನೆಲಸಿಬಿಟ್ಟರು.

ಉದಯನನು ಮನಸ್ಸನ್ನು ಹೇಗೋ ಸಂತಯಿಸಿಕೊಂಡು, ನಳಗಿರಿಯ ಸ್ವಭಾವ ಬೇರ್ಪಟ್ಟದ್ದಕ್ಕೆ ಕಾರಣಗಳನ್ನು ಆಧಾರ ಸಮೇತರಾಗಿ ವಿವರಿಸಿದನು. ಆನೆಯ ಮಾವುತರೂ ಆಸ್ಥಾನದ ವಿದ್ವಾಂಸರೂ ಅವನ ಪಾಂಡಿತ್ಯವನ್ನು ಹೊಗಳಿದರು. ಕಡೆಗೆ ಪ್ರದ್ಯೋತನನು ಉದಯನನ್ನು ಕುರಿತು, 'ಈ ನಗರ ನಿನ್ನದು. ನಾವೆಲ್ಲ ನಿನ್ನವರೇ. ಇನ್ನು ನಿನ್ನ ಬಿಡದಿಗೆ ಹೋಗಿ ದಣಿವಾರಿಸಿಕೊ' ಎಂದು ಉಪಚಾರೋಕ್ತಿ ಹೇಳಿ ಕಳಿಸಿಕೊಟ್ಟನು.

ಕುಂಜರಕೇರಿಯಲ್ಲಿದ್ದ ಅರಮನೆಯನ್ನು ಅಣಿಗೊಳಿಸಿ ಉದಯನನಿಗೆ ಅಲ್ಲಿ ಬಿಡದಿ ಮಾಡಿದ್ದರು. ಬೀದಿ ಮಾರ್ಗವಾಗಿ ಅಲ್ಲಿಗೆ ಹೋಗುತ್ತಿರುವಾಗ

ಕಂಡಕಂಡವರೆಲ್ಲ ಎದ್ದೆದ್ದು ಕೈ ಮುಗಿದು ಕೊಂಡಾಡುತ್ತಿದ್ದರು. ಹೀಗೆ ಹೊಗಳಿಸಿಕೊಳ್ಳುತ್ತ ಹೋಗಿ ನಳಗಿರಿಯಿಂದಿಳಿದು ಅರಮನೆಯನ್ನು ಪ್ರವೇಶಿಸಿದನು.

ಅಲ್ಲಿನ ವೈಭವವನ್ನು ವರ್ಣಿಸಲಳವಲ. ಹೂವಿನ ನರುಗಂಪು ಎಲ್ಲೆಲ್ಲಿಯೂ ಹರಡಿತ್ತು. ಮುತ್ತಿನ ಮಾಲಿಗಳು ತೂಗುತ್ತಿದ್ದುವು. ಮಣಿ ದೀಪಗಳು ಹೊನ್ನ ಕಲಶಗಳು, ರತ್ನದೊಡವುಗಳು, ಹಾಸು ಮಂಚಗಳು—ನಿಧಿಯ ನೆಲೆಮನೆಯೋ ಎಂಬಂತೆ ಹೊಳೆಯುತ್ತಿದ್ದವು. ಬಾಗಿಲಾಳುಗಳು, ಕಾಪಿನಾಳುಗಳು, ಊಳಿಗದ ಹೆಣ್ಣುಗಳು, ಬಾಣಸಿಗರು, ಜಟ್ಟಿಗಳು, ಮೊದಲಾದವರು ಅಪ್ಪಣೆ ಕಾಯುತ್ತಾ ತಮ್ಮ ತಮ್ಮ ಸೇವೆಯಲ್ಲಿ ನಿರತರಾಗಿದ್ದರು.

ಉದಯನನು ಒಳಹೊಕ್ಕ ಹಲವು ಬಾಗಿಲುಗಳನ್ನು ದಾಟಿ ಹಲವು ತೊಟ್ಟಿಗಳಲ್ಲಿ ಹೊಕ್ಕು ಅಲ್ಲಲ್ಲಿ ಏರ್ಪಡಿಸಿದ್ದ ಅನೇಕ ಸೌಕರ್ಯಗಳನ್ನು ನೋಡಿ ಅಚ್ಚರಿಪಟ್ಟನು. ಆ ಆವರಣದೊಳಗೆ ಕಂಗೊಳಿಸುತ್ತಿದ್ದ ತಣ್ಣನೆಯ ತೋಟಗಳು, ಕಲಕಲನೆ ಹರಿಯುವ ಅಬ್ಬಿಗಳು, ಮಾಡು ಬೆಟ್ಟಗಳು, ಆಟದೆಡೆಗಳು, ಚಿತ್ರ ಭೂಮಿಗಳು ಇವನ್ನೆಲ್ಲ ಕಂಡು ಬೆರಗಾದನು.

ಈ ಬೆರಗಿನ ಜೊತೆಗೇ ಸ್ವಲ್ಪ ಸಂಶಯವೂ ಉಂಟಾಯಿತು. "ದುರ್ಯೋಧನಾದಿಗಳು ಪಾಂಡವರಿಗಾಗಿ ನಿರ್ಮಿಸಿದ ಅರಗಿನ ಮನೆಯಂತೆ, ಪ್ರದ್ಯೋತನನು ನನಗೆ ಬಿಟ್ಟಿರುವ ಈ ಬಿಡದಿಯಲ್ಲಿಯೂ ಪಂಚನೆಯಿರಬಹುದೇ ?" ಎಂದು ಸಂಶಯಗೊಂಡನು. ಅಲ್ಲಿದ್ದ ಕೆಲಸಗಾರರ ಜೊತೆಯಲ್ಲಿ ಆ ಅರಮನೆಯ ಒಳಕೋಣೆ ಹೊರಕೋಣೆ ಮೂಲೆ ಮೂಲೆಗಳಲ್ಲಿಯೂ ಹೋಗಿ ನೋಡಿದನು. ಯಾವ ಪಂಚನೆಯೂ ಇಲ್ಲವೆಂದು ನಿಶ್ಚಯಿಸಿಕೊಂಡು ನಿಶ್ಚಿಂತನಾಗಿ ಅಲ್ಲಿ ತಂಗಿದನು.

## ೧೨. ವಿದ್ಯಾಗುರು

ಪ್ರದ್ಯೋತನನಿಗೆ ಆ ದಿನವೆಲ್ಲ ಉದಯನಕುಮಾರನ ಯೋಚನೆಯೇ. ಮರುದಿನ ಬೆಳಿಗ್ಗೆ ನಿದ್ದೆ ತಿಳಿದೆದ್ದು ನಿತ್ಯಕರ್ಮಗಳನ್ನು ನೆರವೇರಿಸಿ, ಉದಯನ

ನೊಡನೆ ಶನಿಯಗಾಗಿ ಮಾತಾಡಬಯಸಿ ಅವನಿಗೆ ಹೇಳಿಕಳಿಸಿದನು. ಅರಸನ ಕರೆಯನ್ನಾಲಿಸಿದ ಕುಮಾರನು ಅಲಂಕರಿಸಿದ ದೊಡ್ಡ ಪಿಡಿಯ ಹೆಡತಲೆಯ ಮೇಲೇರಿ ಪುತ್ರ ಜನರ ವಂದನೆಗಳನ್ನು ಸ್ವೀಕರಿಸುತ್ತ ಅರಮನೆಯ ಬಾಗಿಲಿಗೆ ಬಂದು ನಿಂತನು.

ಚಕ್ರವರ್ತಿ ತಾನೇ ಹೊರಬಂದು ಎದುರುಗೊಂಡು ಆದರದಿಂದ ಒಳಕ್ಕೆ ಕರೆದುಕೊಂಡು ಹೋದನು. ಮಣಿಸಭೆಯೊಂದರಲ್ಲಿ ಇಬ್ಬರು ಕೂರುವ ಪೀಠವಲ್ಲಿ ಮೊದಲು ಉದಯನನನ್ನು ಕುಳ್ಳಿರಿಸಿ ಆಮೇಲೆ ತಾನು ಪಕ್ಕದಲ್ಲಿ ಕುಳಿತನು. ಪ್ರೀತಿಯಿಂದ ಕುಶಲಪ್ರಶ್ನೆ ಮಾಡಿ ಗಂಧ ಪುಷ್ಪಾದಿಗಳಿಂದ ಸತ್ಕರಿಸಿದನು. "ಇದು ನಿನ್ನ ಮನೆ. ಇನ್ನುಮುಂದೆ ಸ್ನೇಹಗೊಂಡು ನಡೆ" ಎಂಬ ಉಪಚಾರೋಕ್ತಿ ಹೇಳಿದನು.

ತನ್ನ ಅಂತರಂಗದ ಆಸೆಯನ್ನು ತಿಳಿಸಬೇಕೆಂದು ಅವನನ್ನು ಕರಸಿದ್ದರೂ ತಾನೇ ತಿಳಿಸಲು ಅದೇಕೋ ಅಳುಕಿದನು; ಸ್ವಲ್ಪ ಹೊತ್ತು ಅಲ್ಲೇ ಇರುವಂತೆ ಹೇಳಿ ಒಳಗೆ ಹೋಗಿ ಶ್ವೇತನನ್ನು ಕಳಿಸಿದನು. ಆ ಮಂತ್ರಿ ಉಚಿತವರಿತು ಮಾತು ಬೆಳೆಸಿ, ''ರಾಜಕುಮಾರರಿಗೆ ಆಯುಧ ವಿದ್ಯೆ ಮೊದಲಾದ ಹಲವು ಕಲೆಗಳನ್ನೂ ವಾಸವದತ್ತೆಗೆ ವೀಣೆಯನ್ನೂ ನೀವು ಅಭ್ಯಾಸ ಮಾಡಿಸಬೇಕೆಂದು ನಮ್ಮರಸರ ಆಸೆ. ಆ ಆಸೆಯನ್ನು ನೆರವೇರಿಸಿಕೊಡಬೇಕು" ಎಂದು ವಿನಯದಿಂದ ಪ್ರಾರ್ಥಿಸಿದನು.

ಉದಯನನಿಗೆ ಯೋಚನೆಗಿಟ್ಟಿತು: ''ಈ ಕೆಲಸ ಮಾಡುವುದು ನಮಗೆ ಮಾನಕ್ಕೆ ಕಡಮೆ. ನಾಚಿ ಒಲ್ಲೆನೆಂದರೆ ಬಯಸಿದ ಕನ್ಯೆಯನ್ನು ಪಡೆಯುವುದಕ್ಕೆ ದಾರಿಯಿಲ್ಲ. ಆ ಕನ್ನೆಯಿಲ್ಲದೆ ನಾವು ಬದುಕುವ ಹಾಗಿಲ್ಲ. ಏನು ಮಾಡುವುದು!' ಎಂದು ಚಿಂತಿಸತೊಡಗಿದನು. 'ಆಚಾರ್ಯತನಕ್ಕೆ ಒಪ್ಪಿಕೊಂಡರೆ ಪಾಠ ಕಲಿಯಲು ಬರುವ ಹಲವರಲ್ಲಿ ನನ್ನ ಮನಸ್ಸನ್ನಪಹರಿಸಿದ ಆ ಕನ್ನೆಯನ್ನು ಕಂಡರೂ ಕಾಣಬಹುದು' ಎಂದು ತರ್ಕಿಸಿದನು. ''ಪ್ರಾಣಕ್ಕೇ ಸಂಚಕಾರ ಬಂದಾಗ ನಡೆವಳಿಯನ್ನು ಸ್ವಲ್ಪ ಮೀರಿದರೂ ಮೀರಬಹುದು' ಎಂದು ಬಲ್ಲವರು ಹೇಳುತ್ತಾರೆ. ಎಂಥ ಕಿರಿಮೆ ಬಂದರೂ ಅರಸನ ಇಷ್ಟವನ್ನು ಒಪ್ಪುವುದೇ ಒಳ್ಳೆಯದು" ಎಂದು ನಿಶ್ಚಯಿಸಿದನು.

ಕಡೆಗೇ ಹಾಗೆಯೇ ತಿಳಿಸಿಬಿಟ್ಟನು. ಕೇಳಿ ಚಕ್ರವರ್ತಿಗೆ ಪರಮಾನಂದ ವಾಯಿತು.

ರಾಜಕುಮಾರರಿಗೆ ಪಾಠ ಪ್ರಾರಂಭವಾಯಿತು. ಬಿಲ್ಲುವಿದ್ಯೆ, ಆನೆ ಯೇರಿಕೆ,ಕುದುರೆಯೇರಿಕೆ,ಬಗೆಬಗೆಯ ಯುದ್ಧಕ್ರಮಗಳು, ನೀತಿಶಾಸ್ತ್ರಗಳು ಇವೇ ಮೊದಲಾದ ರಾಜರಿಗೆ ಬೇಕಾದ ವಿದ್ಯೆಗಳನ್ನು ಕುಮಾರರು ಕಲಿಯ ತೊಡಗಿದರು. ಅವರು ಭಕ್ತಿಯಿಂದ ಶುಶ್ರೂಷೆ ಮಾಡಿ ಶ್ರದ್ಧೆಯಿಂದ ಕಲಿಯುತ್ತಿದ್ದರು. ಉದಯನನೂ ಮನಃಪೂರ್ವಕವಾಗಿ ಪಾಠ ಕಲಿಸುತ್ತ ಬಂದನು. ತನ್ನ ಶತ್ರುವಿನ ಮಕ್ಕಳೆಂದು ಕಡೆಗಣಿಸದೆ ನಿರ್ವಂಚನೆಯಾಗಿ ತಾನು ಅರಿತದ್ದನ್ನೆಲ್ಲ ಕಲಿಸಿಕೊಡುತ್ತಿದ್ದನು.

## ೧೩. ವೀಣೆಯ ಪಾಠ

ಪ್ರದ್ಯೋತನ ಚಕ್ರವರ್ತಿ ತನ್ನ ಹಲವರು ಪುತ್ರಿಯರನ್ನೂ ಕರೆಸಿ ಅವರವರು ಅದುವರೆಗೆ ಕಲಿತಿರುವುದೇನೆಂದು ಕೇಳಿ ತಿಳಿದು ಮೆಚ್ಚಿ ಸಂತೋಷ ಪಡಿಸಿದನು. ಉದಯನಕುಮಾರನಲ್ಲಿ ವೀಣೆ ಕಲಿಯಲು ವಾಸವದತ್ತೆ ಯೊಬ್ಬಳೇ ತಕ್ಕವಳೆಂದು ನಿರ್ಧರಿಸಿದನು. ಬಳಿಕ ಅದಕ್ಕೆ ತಕ್ಕ ಸಿದ್ಧತೆ ಮಾಡುವಂತೆ ಅಪ್ಪಣೆ ಮಾಡಿದನು.

ವೀಣಾಭ್ಯಾಸದಿಂದ ತನ್ನ ಮಗಳಿಗೆ ಮಹಾ ಮಹಿಮೆಯುಂಟಾಗುವು ದೆಂದು ಮಹಾರಾಣಿ ತುಂಬ ಸಂತೋಷಹೊಂದಿದಳು. ಚಕ್ರವರ್ತಿಯ ಮಗಳಿಗೆ ವೀಣೆ ಕಲಿಸುವ ಆಚಾರ್ಯನಾಗಿ ಬರುವವನು ಬಹಳ ಪುಣ್ಯವಂತ ನೆಂದು ಸುತ್ತಿನವರೆಲ್ಲ ಆಶ್ಚರ್ಯಪಟ್ಟರು. ವತ್ಸರಾಜನು ಪಡೆದು ಬಂದಿರುವ ವೀಣೆ ವಿದ್ಯೆ ವಾಸವದತ್ತೆಗೆ ಸರಿಯಾಗಿ ಶೋಭಿಸುತ್ತದೆಯೆಂದು ತಿಳಿದವರು ಪ್ರಸಂಸಿಸಿದರು.

ತಾಯಿಯರೂ ಸಾಕುತಾಯಿಯರೂ ಹೊನ್ನ ಹಣತೆಗಳಲ್ಲಿ ದೀಪ ಹೊತ್ತಿಸಿ ಹೂವಿನಿಂದ ಅಲಂಕರಿಸಿ ರಾಗಾಭಿಮಾನಿ ದೇವತೆಗಳನ್ನು ಕರೆದು ಸ್ತುತಿಸಿದರು. ಆ ಮೇಲೆ ವಾಸವದತ್ತೆಯನ್ನು ಚಂದನದ ನರುನೀರಿನಲ್ಲಿ

ಮಾಯಿಸಿ ಚಿನ್ನರನ್ನಗಳಿಂದ ಅಲಂಕಾರ ಮಾಡಿದರು. ಪಕ್ಕದಲ್ಲಿ ಕನ್ನಿಕೆಯರು ಚೆಲುವಾದ ಚಾಮರ ಬೀಸುತ್ತಿರಲು ನಡೆಮುಡಿಯಮೇಲೆ ಮೆಲ್ಲನೆ ನಡೆಸಿಕೊಂಡು ಗೀತಶಾಲೆಗೆ ಕರತಂದರು.

ಗೀತಶಾಲೆಗೆ ಆನೆಯ ದಂತದ ಕಂಬಗಳು; ಗೋಡೆಗಳಿಗೆಲ್ಲ ಹೊನ್ನ ತಗಡು ಹೊದಿಸಿತ್ತು; ಮುತ್ತಿನ ಮೇಲ್ಕಟ್ಟು ಕಟ್ಟಿತ್ತು. ಎಲ್ಲೆಲ್ಲಿಯೂ ಕಣ್ಸೆಳೆಯುವ ಅಲಂಕಾರ. ವಾಸವದತ್ತೆ ಪರಿವಾರದೊಡನೆ ಒಳಹೊಕ್ಕು ಅಲ್ಲಿನ ವೇದಿಕೆಯಮೇಲೆ ಹಲವು ಬಗೆಯ ಹೂವು ಹರಡಿದ ತನಿಯೆಡೆಯೊಂದರಲ್ಲಿ ತೆರೆಯಮರೆಯಲ್ಲಿ ನಿಂತಳು.

ವೀಣೆ ಕಲಿಸಲು ತಕ್ಕ ಮುಹೂರ್ತ ಬಂತೆಂದು ತಾಯಿಯರೆಂದರು. ಒಡನೆಯೆ ಪರಿಚಾರಿಕೆಯರು ಓಡಿಹೋಗಿ ಉದಯನನಿಗೆ ತಿಳಿಸಿದರು. ಅವನು ಬಂದು ಅಲ್ಲಿ ಸಿದ್ಧಪಡಿಸಿದ್ದ ಪೀಠದಮೇಲೆ ಮಂಡಿಸಿದನು. ಹೀಗೆ ಒಂದೇ ತೆರೆಯ ಆಚೆ ಈಚೆಕಡೆಗಳಲ್ಲಿ ಕುಳಿತಿದ್ದ ಆ ಇಬ್ಬರೂ ಕಳವಳದ ಕಡಲಿನಲ್ಲಿ ಮುಳುಗಿದ್ದರು. "ವೀಣೆ ಕಲಿಯಬಂದಿರುವ ಈ ಕುಮಾರಿ ಅಂದು ಹುಲಿಮುಖ ಮಾಡದಲ್ಲಿ ನಾನು ಕಂಡವಳು ಹೌದೋ ಅಲ್ಲವೋ ?" ಎಂದು ಉದಯನನ ಚಿಂತೆ. 'ವೀಣೆ ಕಲಿಸಬಂದಿರುವ ಈತ ಅಂದು ನಳಗಿರಿಯನ್ನು ಡಗಿಸಿ ನನ್ನ ಮನಸ್ಸನ್ನು ಸೆಳೆದ ಆ ಪುರುಷಸಿಂಹನೋ ಬೇರೆ ಯಾರೋ ?" ಎಂದು ವಾಸವದತ್ತೆಯ ಯೋಚನೆ. "ಆಚಾರ್ಯನಿಗೆ ನಮಸ್ಕಾರ ಮಾಡಬೇಕಾದ ರೀತಿ ಇದು' ಎಂದು ತೋರಿಸಿಕೊಟ್ಟು ಗೆಳತಿಯರು ತೆರೆಯನ್ನು ತೆಗೆದರು. ಒಬ್ಬರನ್ನೊಬ್ಬರು ಕಂಡು ಇಬ್ಬರೂ ಆನಂದಗೊಂಡರು. ಕನ್ನಿಯಾರೂ ಕೈಕೋಲ ಊಳಿಗದವರೂ ಹೊರಗೆ ಕಾವಲು ನಿಂತರು. ಆಗ ಉದಯನನು ವೀಣೆಯನ್ನೆತ್ತಿ ವಾಸವದತ್ತೆಯ ಕೈಗೆ ಕೊಟ್ಟನು. ಅವಳು ಅದನ್ನು ತೆಗೆದುಕೊಂಡು, ಅವನು ಕಲಿಸಿದಂತೆ ಕಲಿಯತೊಡಗಿದಳು.

## ೧೫. ಅನುರಾಗವೃದ್ಧಿ

ಅಲ್ಲಿಂದ ಮುಂದೆ ದಿನದಿನವೂ ಗೊತ್ತಾದ ಹೊತ್ತಿನಲ್ಲಿ ಅವನು ಗೀತಶಾಲೆಗೆ ಬಂದು ವಾಸವದತ್ತೆಗೆ ವೀಣೆ ಕಲಿಸುತ್ತಿದ್ದನು. ರಾಜಕುಮಾರರ

ಪಾಠಪ್ರವಚನಗಳೂ ಕ್ರಮಪ್ರಕಾರವಾಗಿ ಮುಂದುವರಿಯುತ್ತಿದ್ದವು. ಆ ಏರ್ಪಾಡು ಆಗಿನ ಸಂದರ್ಭದಲ್ಲಿ ಉದಯನನಿಗೆ ಹಿತವಾಗಿಯೇ ತೋರಿತು.

ನಗರದ ಜನ ಉದಯನನನ್ನು ಮೆಚ್ಚಿದವರಾದರೂ ವಾಸವದತ್ತೆಗೆ ಗೀತಾಚಾರ್ಯನಾಗಿ ಅವನನ್ನು ಗೊತ್ತುಪಡಿಸಿದ್ದನ್ನು ಸ್ವಲ್ಪಮಟ್ಟಿಗೆ ಅವಗಣಿಸಿದರೆನ್ನಬೇಕು. "ಅಂತಃಪುರಕ್ಕೆ ಹೊರಗಿನವರನ್ನು ಬರಗೊಡಿಸಬಾರದಾಗಿರುವಲ್ಲಿ ತನಗೆ ಹಗೆಯಾದ ರಾಜಕುಮಾರನನ್ನೇ ತನ್ನ ಮಗಳಿಗೆ ಆಚಾರ್ಯನಾಗಿ ಮಾಡಿದ್ದಾನೆ, ನಮ್ಮ ದಡ್ಡ ದೊರೆ. ಇದರ ಕೇಡು ಮುಂದಾದರೂ ಗೋಚರವಾಗದೆ ಇರದು." ಎಂದು ತಮ್ಮ ತಮ್ಮಲ್ಲೇ ಆಡಿಕೊಳ್ಳುತ್ತಿದ್ದರು.

ಉದಯನನಿಗೆ ಉಡಿಗೆತೊಡಿಗೆ ಹೂವು ಗಂಧ ಮೊದಲಾದ ದಿನಬಳಕೆಯ ಆವಶ್ಯಕ ವಸ್ತುಗಳನ್ನು ಒದಗಿಸುವ ಹೊಣೆಯನ್ನು ಚಕ್ರವರ್ತಿ ಪಾಲಕುಮಾರನಿಗೆ ವಹಿಸಿದ್ದನು. ಅವನು ಆ ಕಟ್ಟಳೆಯ ಪ್ರಕಾರ ಅನುದಿನವೂ ನಡಸುತ್ತಿದ್ದನು. ಒಂದು ದಿನ ತನಗೆ ಬೇರೆ ಕೆಲಸವಿದ್ದುದರಿಂದ ತನ್ನೊಡನೆ ಸಹಪಾಠಿಯಾಗಿ ಕಲಿಯುತ್ತಿದ್ದ ವಸಂತಕನ ಸಂಗಡ ಕಳಿಸಿದನು. "ಇನ್ನು ಮೇಲೆ ಇವರ ಮೂಲಕವೇ ಕಳಿಸುವುದಾದರೆ ಸಂತೋಷ' ಎಂದು ಉದಯನ ಸೂಚಿಸಲಾಗಿ, ಅದಕ್ಕೊಪ್ಪಿ ಪಾಲಕುಮಾರನು ಅಂದಿನಿಂದ ವಸಂತಕನ ಮೂಲಕವೇ ಕಳಿಸುತ್ತಾ ಬಂದನು.

ವಸಂತಕನೊಡನೆ ಅಂತರಂಗವಾಗಿ ಮಾತನಾಡುವುದಕ್ಕೆ ಅವಕಾಶವಾಯಿತು. ತನ್ನ ಗೆಳೆಯರೂ ವೀರರೂ ಯಾರು ಯಾರು ಯಾವ ಯಾವ ವೇಷದಲ್ಲಿ ಎಲ್ಲೆಲ್ಲಿ ಇರುವರೆಂಬ ವಿಷಯ ಉದಯನನಿಗೆ ಗೊತ್ತಾಯಿತು. ಬೇರೆ ಬೇರೆ ಹೆಸರು ವೇಷಗಳಿಂದ ನಗರದ ಒಳಗೂ ಹೊರಗೂ ತನ್ನವರು ವ್ಯಾಪಿಸಿ ಯುಗಿಯ ಹಂಚಿಕೆಯಂತೆ ತನ್ನ ಬಿಡುಗಡೆಗಾಗಿ ಸತತವಾಗಿ ಪ್ರಯತ್ನಪಡುತ್ತಿರುವುದನ್ನು ಅವನರಿತುಕೊಂಡನು. ಹೊರಗಿನ ಗೆಳೆಯರು ಉದಯನನಿಂದ ನೇರವಾಗಿ ಸಮಾಚಾರ ತಿಳಿಯಲೂ ಮಾರ್ಗವಾಯಿತು.

ಹೀಗಿರುವಲ್ಲಿ ದಿನದಿನವೂ ವಾಸವದತ್ತೆಯನ್ನು ನೋಡುತ್ತ ಅವಳ ಹಾಡು ನುಡಿಗಳನ್ನು ಕೇಳುತ್ತ ಉದಯನನ ಪ್ರೇಮ ಬೆಳೆಯುತ್ತ ಬಂತು.

ಕನಸಿನಲ್ಲೂ ನನಸಿನಲ್ಲೂ ಅವಳನ್ನೆ ನೆನೆದು ಹಲುಬುವಂತಾದನು. 'ಬೆಂಕಿಯ ಮುಂದಿಟ್ಟ ಮೇಣದಂತೆ ಕರಗಿದನು. ತಾಯ ಮುಂದೆ ಕಟ್ಟಿದ ಕರುವಿನಂತೆ ಹಲುಬಿದನು.' ತಾನು ಹೀಗೆ ಕೊರಗಿ ಕರಗುತ್ತಿದ್ದರೂ ಈ ಬೇರ್ಪಾಟವನ್ನು ಕಂಡರೆ ಉಳಿದವರು ಸಂದೇಹಪಟ್ಟಾರೆಂದು ಬಹಳ ಎಚ್ಚರಿಕೆಯಿಂದಿರುತ್ತಿದ್ದನು.

ವಾಸವದತ್ತೆಯ ಅವಸ್ಥೆಯೂ ಹೀಗೆಯೇ ಆಯಿತು. ಅವಳು ಉದಯನನ ಹತ್ತಿರ ಕಲಿತು ವೀಣೆ ವಿದ್ಯೆಯಲ್ಲಿ ನಿಪುಣತೆ ಪಡೆದು ಬೆಳಗುವಳೆಂದರಿತು ಹಲವು ರಾಜಪುತ್ರರು ಅವಳನ್ನು ಮದುವೆಯಾಗಬಯಸಿದರು. ಒಬ್ಬರಿಗೆ ತಿಳಿಯದಂತೊಬ್ಬರು ಹೊನ್ನಾಭರಣಗಳನ್ನು ಆನೆಗಳ ಮೇಲೆ ಹೇರಿಸಿ ಕಳಿಸಿ ಪ್ರದ್ಯೋತನ ಚಕ್ರವರ್ತಿಗೆ ತಮ್ಮ ಅಭಿಪ್ರಾಯವನ್ನು ಅರಿಕೆ ಮಾಡುತ್ತಿದ್ದರು. ಅವರ ಗುರಿಯನ್ನರಿತರೂ ಚಕ್ರವರ್ತಿ ತನ್ನ ಇಷ್ಟವನ್ನು ಹೊರಪಡಿಸದೆ ಸುಮ್ಮನಿದ್ದನು.

ವಾಸವದತ್ತೆಗೆ ಈ ಸುದ್ದಿ ತಿಳಿಯಿತು. ತನ್ನ ಸಾಕುತಾಯಿಯಾದ ಶಾಂಕಿಯ ತಾಯ ಬಳಿ ಹೋಗಿ, ಕೀಲುಕಿತ್ತ ಹೊಸ ಬೊಂಬೆಯಂತೆ ಬಿದ್ದು ನಡುಗಿ ಬಿಕ್ಕಿ ಬಿಕ್ಕಿ ಅತ್ತಳು. "ಬೇರೆ ಅರಸುಗಳು ನನಗಾಗಿ ಹೊನ್ನು ಕಳಿಸಿದ್ದೂ ಅದನ್ನು ನಮ್ಮ ತಂದೆ ಅಂಗೀಕರಿಸಿದ್ದೂ ನಿಜವಾದರೆ ಪ್ರಾಣ ಬಿಡುವೆನು. ಆ ಮೇಲೆ ನಮ್ಮ ತಂದೆ ತನ್ನ ಇಷ್ಟಪೂರ್ತಿ ಮಾಡಿಕೊಂಡು ಬಾಳಲಿ." ಎಂದು ಗೋಳಾಡಿದಳು.

ಉದಯನನ ಮೇಲಿನ ಪ್ರೀತಿಯಿಂದ ಅವಳು ಹೀಗಾಡುವಳೆಂದು ಶಾಂಕಿಯ ತಾಯಿಗೆ ಗೊತ್ತು. ಅವಳು ವಾಸವದತ್ತೆಯನ್ನು ಎತ್ತಿ ತೊಡೆಯ ಮೇಲೆ ಕೂರಿಸಿಕೊಂಡು ಕಣ್ಣೀರೊರಿಸಿ ಸಂತಯಿಸಿದಳು. "ನನ್ನ ಬೊಂಬೆಯೇ! ಅಳಬೇಡ. ನಿನ್ನನ್ನು ಬೇರೆಯವರಿಗೆ ಮದುವೆ ಮಾಡಿಕೊಡಲು ನಮ್ಮರಸ ಒಪ್ಪಿಯಾನೇ ? ಒಪ್ಪಿದರೆ ನಾವೆಲ್ಲ ಊರು ಬಿಟ್ಟು ಹೋಗಿಬಿಡುತ್ತೇವೆ ನಿಮ್ಮ ತಂದೆಯ ಅಭಿಪ್ರಾಯವನ್ನು ನಾನು ಬಲ್ಲೆ. ಚಿಂತಿಸಬೇಡ. ಎಳೆಯ ಪ್ರಾಯ, ಚೆಲುವು, ಒಳ್ಳೆಯ ಕುಲ, ಸಂಪತ್ತು, ಪರಾಕ್ರಮ, ವಿದ್ಯೆ, ವಿವೇಕ—ಈ ಎಲ್ಲ ಗುಣಗಳೂ ಇರುವವನಿಗಲ್ಲದೆ

ಹೆಣ್ಣು ಕೊಡಬೇಕು ? ಈ ಎಲ್ಲವೂ ತುಂಬಿರುವ ಉದಯನಕುಮಾರನಿಗೇ ನಿನ್ನನ್ನು ಮದುವೆ ಮಾಡಿಕೊಡುತ್ತಾರೆ” ಎಂದು ಹಲವು ರೀತಿಯಲ್ಲಿ ನಂಬಿಸಿ ಸಮಾಧಾನಪಡಿಸಿದಳು.

ಈ ಶಾಂಕಿಯ ತಾಯಿ ಕೌಶಾಂಬೀ ನಗರದವಳು. ಯಾವುದೋ ಒಂದು ಸಂದರ್ಭದಲ್ಲಿ ಸಾವಿನ ಸಂಕಟಕ್ಕೆ ಸಿಕ್ಕಿದ್ದ ಅವಳನ್ನು ಉದಯನ ಕುಮಾರ ಬದುಕಿಸಿದ್ದನು. ಆ ಮೇಲೆ ಆಕೆ ತಪಸ್ವಿನಿಯಾಗಿ ದೇಶ ದೇಶಗಳನ್ನು ಸುತ್ತುತ್ತಿದ್ದಳು. ಒಮ್ಮೆ ಉಜ್ಜಯಿನಿಗೆ ಬಂದಿದ್ದಾಗ ಪಟ್ಟದ ಮಹಾದೇವಿಯ ಒತ್ತಾಯದಿಂದ ಅರಮನೆಯಲ್ಲಿ ನಿಲ್ಲಬೇಕಾಯಿತು. ಅಂತಃಪುರ ಸ್ತ್ರೀಯರಿಗೆ ಧರ್ಮೋಪದೇಶ ಮಾಡುತ್ತಾ ದೇವಿಯ ಸಂಗಾತಿಯಾಗಿ ನಿಂತಳು. ವಾಸವದತ್ತೆ ಹುಟ್ಟಿದಮೇಲೆ ಅವಳನ್ನು ಎತ್ತಿ ಆಡಿಸಿ ಅವಳಿಗೆ ಸಾಕುತಾಯಿಯಾದಳು.

ಆ ದಿನವೇ ಶಾಂಕಿಯ ತಾಯಿ ಉದಯನನನ್ನು ರಹಸ್ಯವಾಗಿ ಕಂಡು ತನ್ನ ಗುರುತು ಹೇಳಿದಳು. ಆ ಮೇಲೆ ಉಚಿತವರಿತು ಮಾತನಾಡುತ್ತಾ ವಾಸವದತ್ತೆಯ ವಿಷಯದಲ್ಲಿ ಅವನ ನಿಲುವೇನೆಂದು ಪ್ರಶ್ನೆ ಮಾಡಿದಳು. ತನ್ನ ಅಂತರಂಗವನ್ನು ಹೊರಪಡಿಸಲು ಉದಯನನಿಗೆ ಅಳುಕು. ಆದರೂ ಅಲ್ಲಿ ತನಗೆ ಬೇರೆ ಯಾವ ನೆರವೂ ಇಲ್ಲವೆಂದು ನೆನೆದು ತನ್ನ ಮನಃಸ್ಥಿತಿಯನ್ನು ಅವಳಲ್ಲಿ ಹೇಳಿಕೊಂಡನು. ತಾನು ಆಚಾರ್ಯನಾಗಲು ಒಪ್ಪಿದ್ದಕ್ಕೆ ವಾಸವದತ್ತೆಯ ಮೇಲಿನ ಒಲವೇ ಕಾರಣವೆಂದು ವಿವರಿಸಿದನು

ಕೇಳಿ ಶಾಂಕಿಯ ತಾಯಿಗೆ ಸಂತೋಷವಾಯಿತು. ‘‘ವಾಸವದತ್ತೆಯನ್ನು ಮದುವೆ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡು. ನಿನ್ನೊಡನೆ ತನಗೆ ಮದುವೆಯಾಗದಿದ್ದರೆ ಅವಳು ಯಾವ ಬಗೆಯಲ್ಲಾದರೂ ಪ್ರಾಣ ಬಿಡುವಳೆಂದು ಅಂಜುತ್ತೇನೆ” ಎಂದು ಎಚ್ಚರಿಸಿದಳು. ಉದಯನನ ಪ್ರೇಮವನ್ನು ದತ್ತೆಗೂ ತಿಳಿಸಿ ಅವನ ಕಳವಳವನ್ನು ಕಳೆದನು.

## ೧೫. ವಿದ್ಯಾ ಪ್ರದರ್ಶನ

ಇಷ್ಟು ಹೊತ್ತಿಗೆ ಕುಮಾರರಿಗೆ ಕಲಿಸಬೇಕಾದ ವಿಶೇಷ ಪಾಠ ಮುಗಿದಿತ್ತು. ವಾಸವದತ್ತೆಯೂ ವೀಣೆಯನ್ನು ಚೆನ್ನಾಗಿ ಕಲಿತಿದ್ದಳು: ಈ

ಸಂಗತಿಯನ್ನು ಪ್ರದ್ಯೋತನನಿಗೆ ಅರಿಕೆ ಮಾಡಲು ಅವನು ಕುಮಾರರನ್ನು ಸಭೆಗೆ ಕರಸಿ ಅವರ ಚಾತುರ್ಯವನ್ನು ಪ್ರದರ್ಶಿಸಬೇಕೆಂದು ನಿಶ್ಚಯಿಸಿದನು.

ಗೊತ್ತಾದ ದಿನ ನಗರದ ಹಿರಿಯರೂ ನಾನಾ ಕಲೆಗಳಲ್ಲಿ ಹೆಸರಾಂತ ಹಿರಿಯ ವಿದ್ವಾಂಸರೂ ಅರಸನ ಅಪ್ಪಣೆಯಂತೆ ಸಭಾಂಗಣದಲ್ಲಿ ಬಂದು ತಂತಮಗೆ ಗೊತ್ತುಮಾಡಿದ ಪೀಠಗಳಲ್ಲಿ ಕೂತುಕೊಂಡರು. ಚಕ್ರವರ್ತಿ ಅಧ್ಯಕ್ಷಸ್ಥಾನದಲ್ಲಿ ಚಂದನ ಪೀಠದಮೇಲೆ ದಿಂಬನ್ನು ಒರಗಿ ಮಂಡಿಸಿದನು. ರಾಜಕುಮಾರರು ಒಬ್ಬೊಬ್ಬರಾಗಿ ಬಂದು ತಾವು ಕಲಿತ ಕಲಾ ಕೌಶಲ್ಯಗಳನ್ನೆಲ್ಲಾ ಚೆನ್ನಾಗಿ ಪ್ರದರ್ಶಿಸಿದರು. ಅವರ ಶಾಸ್ತ್ರಜ್ಞಾನವೂ ಪ್ರಯೋಗ ಕೌಶಲ್ಯವೂ ಒಂದನ್ನೊಂದು ಮೀರಿಸಿತ್ತು. ಕಂಡು ಸಭೆಯವರೆಲ್ಲ ಅಚ್ಚರಿಪಟ್ಟರು. ಅರಸನೂ ಅಚ್ಚರಿಪಟ್ಟನು. "ತನಗೂ ನಮಗೂ ಇರುವ ವಿರೋಧವನ್ನು ನೆನೆಯದೆ ಕಪಟವಿಲ್ಲದಂತೆ ಉದಯನನು ತನ್ನ ಮಕ್ಕಳಿಗೆ ವಿದ್ಯೆ ಕಲಿಸಿದ್ದಾನೆ. ಇವನಿಗೆ ನಾವು ಪ್ರತ್ಯುಪಕಾರವೆಂದು ಏನು ಮಾಡಿದರೂ ಅದು ಸಾಲದಾಗುತ್ತದೆ" ಎಂದು ತನ್ನ ಸುತ್ತ ಇದ್ದ ಹಿರಿಯರೊಡನೆ ನುಡಿದನು ಉದಯನನಿಗೆ ಉಪಚಾರ ಹೇಳಿ ಸನ್ಮಾನ ಮಾಡಿ ಅವನ ಬಿಡದಿಗೆ ಕಳಿಸಿದನು.

ಅನಂತರ ಅಂತಃಪುರಕ್ಕೆ ಹೋಗಿ, ಕುಮಾರರು ಸಭೆಯಲ್ಲಿ ಮೆರೆದ ವಿದ್ಯಾಚಾತುರ್ಯವನ್ನು ಮಹಾದೇವಿಯ ಹತ್ತಿರ ಪ್ರಶಂಸಿಸಿದನು. ಕೇಳಿ ಸಂತುಷ್ಟಳಾಗಿ ಆಕೆ, "ದತ್ತೆ ಕಲಿತದ್ದನ್ನೂ ಸಭೆಯಲ್ಲಿ ತೋರಿಸಬೇಕು" ಎಂದಳು. ಅದನ್ನು ಉದಯನನಿಗೆ ತಿಳಿಸಲು ಅವನೂ ಒಡಂಬಟ್ಟನು.

ಶುಭದಿನದಲ್ಲಿ ರಾಜಸಭೆ ಮತ್ತೆ ಕೂಡಿತು. ಗಾನ ಪರಿಶ್ರಮವುಳ್ಳವರೂ ವಾದನನಿಪುಣರೂ ರಸಿಕ ವಿದ್ವಾಂಸರೂ ಸಭೆಯಲ್ಲಿ ಕಿಕ್ಕಿರಿದರು. ಉಪದೇಶ ಕಾಲದಲ್ಲಿನಂತೆಯೇ ಬಹು ಸಡಗರದಿಂದ ಸಭೆಯನ್ನು ಅಲಂಕರಿಸಿದ್ದರು. ವಾಸವದತ್ತೆ ಗೆಳತಿಯರೊಡನೆ ಸಭೆಗೆ ಬಂದು ವಿಧಿಪ್ರಕಾರವಾಗಿ ವೀಣೆ ನುಡಿಸಿದಳು. ಕೇಳಿದವರೆಲ್ಲ ಮನಸ್ತಣಿದು ಹಿಗ್ಗಿಹೋದರು. ಮೊದಲು ವಿದ್ಯಾನಿಧಿಯಾದ ವತ್ಸರಾಜನನ್ನು ಹೊಗಳಿದರು. ಬಳಿಕ, ಆತನ ಮೆಚ್ಚಿನ ವೀಣಾವಿದ್ಯೆಯನ್ನು ಅಷ್ಟು ಚೆನ್ನಾಗಿ ಕಲಿತುಕೊಂಡ ವಾಸವದತ್ತೆಯನ್ನು

ಪ್ರಶಂಸಿಸಿದರು. ಇಂಥ ಮಕ್ಕಳನ್ನು ಪಡೆದ ಪುಣ್ಯವಂತನೆಂದು ತಮ್ಮರಸನನ್ನು ಕೊಂಡಾಡಿದರು.

ಘೋಷವತಿಯನ್ನು ನುಡಿಸಿ ಕೆಳಗಿಟ್ಟು ವಾಸವದತ್ತೆ ಬಂದು ತಂದೆಗೆ ನಮಸ್ಕಾರ ಮಾಡಿದಳು. ಅವನು ಮೆಚ್ಚು ನುಡಿದು ತಾಯಿ ಬಳಿ ಕಳಿಸಿದನು. ಹೆತ್ತ ತಾಯಿಯೂ ಉಳಿದ ತಾಯಿಯರೂ ಅವಳನ್ನು ತಬ್ಬಿ ಮುದ್ದಾಡಿದರು.

ಉದಯನನ್ನು ಬೇಗ ಕೌಶಾಂಬಿಗೆ ಕಳಿಸಿ, ಅವನು ಮದುವೆಯಾಗಿ ಬಾಳುವಂತೆ ಮಾಡುವುದು ತನ್ನ ಕರ್ತವ್ಯವೆಂದು ಪ್ರದ್ಯೋತನನು ನಿರ್ಧರಿಸಿ ಕೊಂಡನು. ಆರುಣಿಯನ್ನು ಗೆದ್ದು ಉದಯನನಿಗೆ ಪಟ್ಟಗಟ್ಟ ಬಯಸಿ ಮಂತ್ರಿಗಳೊಡನೆ ಆಲೋಚಿಸಿದನು. ಅವರೂ ಒಪ್ಪಿದರು.

ಆಗ ಚಕ್ರವರ್ತಿ ಉದಯನನ್ನು ಆಸ್ಥಾನಕ್ಕೆ ಕರೆಸಿಕೊಂಡು, "ಲೋಕದ ಜನ ಬೇರಿನ ಔಷಧಕ್ಕಾಗಿ ಮರವನ್ನುರುಳಿಸುವಂತೆ, ನನ್ನ ಮೇಲ್ಮೆಯನ್ನು ಬಯಸಿ ನಿನ್ನನ್ನು ಕೀಳುಮಾಡಿದೆ. ಈ ಕೆಟ್ಟತನವನ್ನು ನೆನೆಯಬೇಡ" ಎಂದು ಅನುನಯ ಹೇಳಿದನು. "ಕೌಶಾಂಬಿಯೂ ಉಜ್ಜಯಿನಿಯೂ ಹಿಂದಿನ ಹಗೆತನವನ್ನು ತೊರೆಯಲಿ. ಇನ್ನುಮುಂದೆ ಹೊಕ್ಕು ಬಳಸಿ ನಡೆಯಲಿ" ಎಂದು ಡಂಗೂರ ಹೊಡಸಿ ಸಾರಿಸಿದನು.

"ಹಿಂದೆ ನಾನು ಉದಯನನನ್ನು ಅಡಗಿಸಬಯಸಿದ್ದೆ. ಆದರೆ ಈಗ ಇವನನ್ನು ಹೆಚ್ಚಿಸಬೇಕೆಂದಿದ್ದೇನೆ. ನೀನು ನಮ್ಮವನಾದರೆ ಕಪ್ಪಕೊಟ್ಟು, ಕೌಶಾಂಬಿಯನ್ನು ಬಿಟ್ಟು ಹೊರಟು ಹೋಗು. ಇಲ್ಲವಾದರೆ ಕದನಕ್ಕೆ ನಿಲ್ಲು. ಉದಯನನಿಗೆ ನೆರವಾಗಿ ದಂಡಿನೊಡನೆ ನನ್ನ ಕುಮಾರ ಪಾಲಕನೂ ಬರುತ್ತಾನೆ" ಎಂದು ಓಲೆ ಬರಸಿ ಕೊಟ್ಟು ಆರುಣಿಯ ಬಳಿಗೆ ದೂತನನ್ನಟ್ಟಿ ದನು. ಉದಯನನಿಗೆ ನಾನಾ ಬಗೆಯ ಉಡುಗೊರೆಗಳನ್ನು ಕೊಟ್ಟು ಮನ್ನಿಸಿ, 'ಸೇನೆಗಳು ಸಜ್ಜಾಗಲಿ. ಪಾಲಕಕುಮಾರನು ನಾಳೆ ಉದಯನನೊಡನೆ ಹೊರಡಲಿ'' ಎಂದು ಅಪ್ಪಣೆ ಮಾಡಿ ಆಸ್ಥಾನದಿಂದ ಎದ್ದನು.

## ೧೬. ನೀರಹಬ್ಬ

ಯೂಗಿಗೆ ಸುದ್ದಿ ತಿಳಿಯಿತು. ''ಹೀಗಾದರೆ ನಾನು ಮಾಡಿದ ಪ್ರತಿಜ್ಞೆ ನೆರವೇರಿದಂತಾಗುವುದಿಲ್ಲ!" ಎಂದು ಚಿಂತಿಸಿದನು. ''ಹೀಗೆ

ನಡೆಯುವಂತೆ ತಡೆದು ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಬೇಕು" ಎಂದು ನಿಶ್ಚಯಿಸಿದನು.

ಬಳಿಕ ಭಾಗೀರಥಿಯೆಂಬ ಕಣಿಗಾತಿಯ ಬಳಿ ಹೋಗಿ ನೀರಹಬ್ಬವನ್ನು ನಡಸುವಂತೆ ಕಣಿ ಹೇಳಬೇಕೆಂದು ತಿಳಿಸಿದನು. ಅವಳು ದೈವಾವೇಶ ಬಂದವಳಂತೆ ಕೈಬೀಸಿ ಕುಣಿಯುತ್ತಾ ನಗರದಲ್ಲಿ ಹೊರಟಳು; ಎಲ್ಲೆಲ್ಲೂ ಕಣಿ ಹೇಳತೊಡಗಿದಳು: "ಹೋದ ವರ್ಷ ಈ ಊರವರು ನೀರ ಹಬ್ಬ ಮಾಡಲಿಲ್ಲ. ಅದರಿಂದ ಕೋಪಗೊಂಡು ನಳಗಿರಿಗೆ ಮದವೇರಿಸಿದ ದೇವತೆ ನಾನು. ಈಗಲೂ ಈ ಹಬ್ಬವನ್ನು ನೀವು ಮಾಡದೆ ಹೋದರೆ ಮತ್ತೆ ಆ ಆನೆಯ ಮೈಯೊಳಗೆ ಹೋಗುತ್ತೇನೆ; ನಗರವನ್ನು ನಾಶಮಾಡುತ್ತೇನೆ" ಎಂದು ಬೀದಿ ಬೀದಿಗಳಲ್ಲಿ ಸಾರಿ ಹೇಳುತ್ತ ಬಂದಳು.

ಜನ ದಿಗಿಲುಗೊಂಡರು. ಹಂದಿಯಿಂದ ನೊಂದ ನಾಯಿ ಅನ್ನದ ಮಡಕೆಯನ್ನು ಕಂಡರೂ ಅದು ಹಂದಿಯೆಂದೇ ನೆನೆದು ನಡುಗುವ ಹಾಗೆ ಆ ಹುಸಿ ಆವೇಶದ ಕಣಿಗೂ ಜನರು ಹೆದರಿದರು. ಅರಮನೆಗೆ ಹೋಗಿ ಅರಸನಿಗೆ ತಿಳಿಸಿಬಿಟ್ಟರು. ಅದನ್ನು ಕೇಳಿದ ಪ್ರದ್ಯೋತನನು, "ನೀರ ಹಬ್ಬ ನಡೆಯಲಿ" ಎಂದು ಕೂಡಲೆ ಅಪ್ಪಣೆ ಮಾಡಿದನು.

'ನಾಳೆ ನೀರಾಟದ ಅಲಂಕಾರ' ಎಂದು ನಗರದಲ್ಲಿ ಡಂಗುರ ಹೊಡೆಯಿತು. ಜನರೆಲ್ಲ ನಲಿದರು. ಸ್ವಭಾವವಾಗಿಯೇ ಅವರಿಗೆ ನೀರಾಟದ ಬಯಕೆ. ಈ ಹಬ್ಬದ ನೆವದಿಂದ ಅರಸನ ಆಜ್ಞೆಯೂ ಆಗಿದೆ. ಕೇಳಬೇಕೆ ? ಹಿಗ್ಗಿ ಸಡಗರಪಡುತ್ತ ಗುಂಪುಗುಂಪಾಗಿ ಹೊಳೆಯ ದಡದಲ್ಲಿ ಬಂದು ಸೇರಿದರು. ಅಲ್ಲಲ್ಲೇ ಇರುವ ತೋಪುಗಳಲ್ಲಿಯೂ ತೋಟಗಳಲ್ಲಿಯೂ ಗುಡಾರಗಳನ್ನು ಹೊಡಿ ತಸತಸಿಯಾಗಿ ತಂಗಿದರು. ಹಲವು ಸರಕುಗಳನ್ನು ಮಾರುವ ಅಂಗಡಿಗಳು ಅಲ್ಲಲ್ಲೇ ಕಾಣಿಸಿಕೊಂಡವು.

ಉತ್ಸವ ಇಪ್ಪತ್ತೊಂದು ದಿನಗಳವರೆಗೂ ನಡೆಯುವುದು ವಾಡಿಕೆ. ಎಂಥ ಅಪರಾಧ ಮಾಡಿದವರಾದರೂ ನಾಡುತೊರೆದು ಹೋಗಿದ್ದವರು ಆ ಕಾಲದಲ್ಲಿ ಹಿಂದಿರುಗಿ ಬರಬಹುದು. ಹಬ್ಬ ಕಳೆಯುವವರೆಗೂ ಅವರನ್ನು ಯಾರೂ ಬಂಧಿಸುವಂತಿಲ್ಲ ಈ ಸಂಗತಿಯನ್ನು ಮನೆ ಮನೆ ಹರಿ ಹೊಳಗಿಸಿ

ಸಾರಿಸಿದನು. ಮೈಗಾವಲು ದಳದವರು ಹೊರತು ಉಳಿದ ವೀರರೆಲ್ಲರೂ ಆ ಕಾಲದಲ್ಲಿ ಆಯುಧ ಧರಿಸಬಾರದೆಂದು ಅಪ್ಪಣೆ ಮಾಡಿದನು.

ಆ ಮೇಲೆ ಅಂತಃಪುರಸ್ತ್ರೀಯರೊಡನೆಯೂ ಪರಿವಾರದೊಡನೆಯೂ ಅರಸನು ಅರಮನೆಯಿಂದ ಹೊರಟು ನಳಗಿರಿಯ ಮೇಲೇರಿ ಹೊಳೆಕರೆಯನ್ನು ಸೇರಿದನು. ಬಗೆಬಗೆಯ ಬಂಡಿಗಳು, ಪಲ್ಲಕ್ಕಿಗಳು ಮುಂತಾದ ವಾಹನಗಳಲ್ಲಿ ರಾಣಿವಾಸದವರು ನಡೆದರು. ಅವರಿಗೆ ಬೇಕಾದ ಜೀರ್ಕೊಳವಿ, ಸುಳಿನೀರ ಕೊಂಬು ಮೊದಲಾದ ನೀರಾಟದ ಸಾಧನಗಳು ಆನೆಗಳ ಮೇಲೆ ಸಾಗಿದವು.

ವಾಸವದತ್ತೆ ಹೊರಡುವುದು ಸ್ವಲ್ಪ ತಡವಾಯಿತು. ಗೆಳತಿಯರೆಲ್ಲ ಒಟ್ಟುಗೂಡಿ ಬರಲೆಂದು ಅವಳು ಹಿಂದೆ ನಿಂತಿದ್ದಳು. ಮಹಾದೇವಿ ಆ ಗೆಳತಿಯರನ್ನೂ ದತ್ತೆಯ ಸಖಿಯಾದ ಕಾಂಚನಮಾಲೆಯನ್ನೂ ಕರೆದು, "ಇವಳು ನಿಮ್ಮ ಕೈಯೆಡೆ" ಎಂದು ಮಗಳ ರಕ್ಷಣೆಯನ್ನು ಅವರಿಗೆ ಒಪ್ಪಿಸಿ ತಾನು ಅರಸನನ್ನು ಹಿಂಬಾಲಿಸಿದಳು. ವಾಸವದತ್ತೆ ಬಂಡಿಯಲ್ಲಿ ಹೊರಟಳು. ಅದಕ್ಕೆ ಹೂಡಿದ್ದ ಎತ್ತುಗಳು ಕಾಲುಜಾರಿ ಮುಗ್ಗರಿಸಿದುವು. ಆಗ ಅವಳು ಬಂಡಿಯಿಂದಿಳಿದು ಪಲ್ಲಕ್ಕಿಯನ್ನೇರಿದಳು.

ಈ ಉತ್ಸವದಲ್ಲಿ ಭಾಗವಹಿಸಿ ಆನಂದಿಸುವಂತೆ ಉದಯನನಿಗೆ ಹೇಳಿ ಕಳಿಸಿದರು. ನಳಗಿರಿಗೆ ಎರಡನೆಯದೆನಿಸಿ ಬಹು ಬಲಶಾಲಿಯಾದ ಭದ್ರಾವತಿಯೆಂಬ ಹೆಣ್ಣಾನೆಯನ್ನು ಅವನಿಗಾಗಿ ಕಳಿಸಿದರು. ಅರಸನ ಅಪೇಕ್ಷೆಯಂತೆ ಆ ಮಂಗಳಗಜದ ಮೇಲೇರಿ ವಸಂತಕನೊಡನೆ ಉದಯನನೂ ಹೊಳೆಯ ವಡಕ್ಕೆ ಹೋಗಿ ಸೇರಿದನು.

ಸ್ನಾನಕ್ಕೆ ತಕ್ಕ ಸುಮುಹೂರ್ತ ಒದಗಿ ಬಂತೆಂದು ಜೋಯಿಸರು ತಿಳಿಸಿದರು. ವಿಜಯದುಂದುಭಿಯ ಮೊಳಗಿನ ಮೂಲಕ ಎಲ್ಲೆಡೆಗೂ ಆ ಸುದ್ದಿ ಹರಡಿತು. ಅರಸನು ಆನೆ ಕುದುರೆಗಳನ್ನೂ ಲೆಕ್ಕವಿಲ್ಲದಷ್ಟು ಹೊನ್ನನ್ನೂ ದಾನ ಮಾಡಿದನು; ತುಲಾಭಾರ ತೂಗಿಸಿಕೊಂಡು ಅದನ್ನು ತಕ್ಕವರಿಗೆ ಕೊಟ್ಟನು; ಹಿರಿಯರನ್ನು ಸತ್ಕರಿಸಿ ದಕ್ಷಿಣೆ ಸಲ್ಲಿಸಿದನು. ಬಳಿಕ ಹೊಳೆಯ ನ್ನಿಳಿದು ವಿಧಿಪ್ರಕಾರವಾಗಿ ಸ್ನಾನಮಾಡಿದನು. ಆ ಸುಮುಹೂರ್ತದಲ್ಲಿ ಅಲ್ಲಿ

ನೆರೆದಿದ್ದ ಸಮಸ್ತ ಪ್ರಜೆಗಳೂ ತಂತಮ್ಮ ಸ್ಥಿತಿಗನುಗುಣವಾಗಿ ದಾನಮಾಡಿ ಹೊಳೆಗಿಳಿದು ನೀರಾಡಿ ಆನಂದಿಸುತ್ತಿದ್ದರು.

ಅರಸುಕುಮಾರರೂ ವಾಸವದತ್ತೆ ಮೊದಲಾದ ರಾಜಕುಮಾರಿಯರೂ ಒಡನಾಡಿಗಳೊಡನೆ ನೀರಾಡಿ ತಣಿದರು ಆ ಮೇಲೆ ಉಟ್ಟು ತೊಟ್ಟು ಅಲಂಕರಿಸಿಕೊಂಡು ನೀರಾಟದ ಸಂಭ್ರಮಗಳನ್ನು ನೋಡುತ್ತಾ ಅಲ್ಲಲ್ಲಿ ಸುತ್ತಾಡಿ ನಲಿಯುತ್ತಿದ್ದರು.

## ೧೭. ವಾಸವದತ್ತಾಹರಣ

ಆ ಉತ್ಸವಕಾಲದಲ್ಲಿ ಪ್ರದ್ಯೋತನನ ಮಹಾವೈಭವವೆಲ್ಲ ಉದಯನನಿಗೆ ಸ್ಪಷ್ಟವಾಗಿ ಗೋಚರವಾಯಿತು. ಆ ಸಂಪತ್ತನ್ನೂ ಅಲ್ಲಿ ಆನಂದದಿಂದ ನೀರಾಡುವ ಅವನ ಪ್ರಜೆಗಳ ಸಂತೃಪ್ತಿಯನ್ನೂ ಕಂಡು ಅವನ ಹೃದಯ ಚಿಂತೆಯ ಬೀಡಾಯಿತು. "ಪ್ರದ್ಯೋತನನನ್ನು ವಂಚಿಸಿಯಾದರೂ ತನ್ನ ಮನದಣಿಕೆಯನ್ನು ನೆರವೇರಿಸಿಕೊಳ್ಳಬಾರದೇಕೆ ?" ಎಂದು ಯೋಚಿಸಿದನು. 'ಭದ್ರಾವತಿಯ ಮೇಲೇರಿರುವ ಈ ಸಮಯವೇ ಅದಕ್ಕೆ ಸಕಾಲ' ಎಂದು ಭಾವಿಸಿದನು.

ಜೊತೆಯಲ್ಲಿದ್ದ ವಸಂತಕನು ಒಡೆಯನ ಇಂಗಿತವನ್ನರಿತುಕೊಂಡನು. ಯೂಗಿ ಮೊದಲೇ ತನ್ನೊಡನೆ ತಿಳಿಸಿದ್ದ ಮುಖ್ಯ ಸಂದೇಶವನ್ನು ಉದಯನ ನಿಗೆ ಹೇಳಿದನು: "ಸಮಯ ಸಾಧಿಸಿ ಹಗೆಯನ್ನು ಗೆಲ್ಲುವುದು ಅರಸರ ಕರ್ತವ್ಯ. ಪ್ರದ್ಯೋತನನ ಕಾವು ಬಲವತ್ತಾದ್ದೇನೋ ನಿಜ. ಆದರೂ ಅವನ ಹಿಡಿತದಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಇದು ಒಳ್ಳೆಯ ಸಮಯ. ಉದಯನಕುಮಾರನು ಭದ್ರಾವತಿಯ ಮೇಲೇರಿರುವುದರಿಂದಲೂ ವಾಸವದತ್ತೆ ಪ್ರತ್ಯೇಕವಾಗಿ ನೀರಾಡುವವಳಾದ್ದರಿಂದಲೂ ಅವಳನ್ನು ಸುಲಭವಾಗಿ ಆನೆಯ ಮೇಲೆ ಕೂರಿಸಿಕೊಂಡು ಹೋಗಬಹುದು. ತಡಮಾಡದೆ ನಮ್ಮ ದೊರೆ ಹಾಗೆ ಮಾಡಲಿ. ವಾಸವದತ್ತೆಯನ್ನು ಏರಿಸಿಕೊಂಡು ವತ್ಸನಾಡಿಗೆ ನಡೆದುಬಿಡಲಿ. ತಡೆಯಬಂದ ವೀರಪುರುಷರನ್ನು ಅಡ್ಡಗಟ್ಟಿ ನಿಲ್ಲಿಸಲು

ತಕ್ಕ ಏರ್ಪಾಡು ಮಾಡಿದ್ದೇನೆ. ಭದ್ರಾವತಿಯನ್ನು ಯಾರೂ ಹಿಂಬಾಲಿಸಲಾರರು. ಆ ಆನೆ ಅವಂತಿನಾಡಿನ ಎಲ್ಲೆಯನ್ನು ದಾಟಿ ಹೋಗಲಾರದು. ಆದರೂ ಚಿಂತೆಯಿಲ್ಲ. ಅದು ಹೋಗುವಷ್ಟು ದೂರ ಹೋಗಲಿ. ಮುಂದಿನ ಮಾರ್ಗದಲ್ಲಿ, ಗಡಿಯ ಬಳಿ, ಕಾಡುಬೇಡರಿಂದ ಸ್ವಲ್ಪ ತೊಂದರೆ ಬರಲೂ ಬಹುದು. ಅಲ್ಲಿನ ಬೇಡರೊಡೆಯನ ಸ್ನೇಹ ನನಗಿರುವುದರಿಂದ ಉದಯನನ ರಕ್ಷಣೆಗೆ ಅನುಕೂಲವಾಗುವಂತೆ ಮೊದಲೇ ಹೇಳಿದ್ದೇನೆ. ಅಲ್ಲಿ ಸ್ವಲ್ಪ ತೊಂದರೆಯುಂಟಾದರೂ ಹೇಗೋ ಪರಿಹರಿಸಿಕೊಂಡು ಮುಂದೆ ಸಾಗಲಿ. ಈಗ ಹೀಗೆ ಮಾಡದಿದ್ದರೆ ನಮ್ಮರಸ ತನ್ನ ಅರಸಾಳ್ಕೆಯನ್ನೇ ಕಳೆದುಕೊಳ್ಳುವುದು ನಿಶ್ಚಯ."

ಈ ಸಂದೇಶವನ್ನು ಕೇಳಿದಮೇಲೆ ಅದುವರೆಗೆ ಹಿಂದೆ ಮುಂದೆ ಹುಯ್ದಾಡುತ್ತಿದ್ದ ಮನಸ್ಸು ಒಂದು ನೆಲೆಗೆ ನಿಂತಿತು. ಉದಯನನು ಅಲ್ಲಲ್ಲಿನ ನೋಟ ನೋಡುವವನಂತೆ ಭದ್ರಾವತಿಯನ್ನು ಅತ್ತಿತ್ತ ಮೆಲ್ಲಮೆಲ್ಲನೆ ನಡಸಿಕೊಂಡ, ವಾಸವದತ್ತೆ ಗೆಳತಿಯರೊಡನೆ ಆಡುತ್ತಿದ್ದ ಕಡೆಗೆ ಹೋಗಿ ಸೇರಿದನು.

ಅಷ್ಟುಹೊತ್ತಿಗೆ ಊರೊಳಗೆ ದೊಡ್ಡ ಬೆಂಕಿ ಕಾಣಿಸಿಕೊಂಡಿತು. ನೂರಾರು ಮನೆಗಳು ಉರಿದು ಹೋದವು. ದಂಡಾಳುಗಳ ಹಲವು ಕೇರಿಗಳು ಸುಟ್ಟುಹೋದವು. ಬಹು ಭಾಗದ ಜನರೆಲ್ಲ ಜಲಕೇಳಿಯಲ್ಲಿ ತೊಡಗಿ ಹೊಳೆಯ ಬಳಿ ಇದ್ದದ್ದರಿಂದ ಬೆಂಕಿಯ ಹಬ್ಬುಗೆಯನ್ನು ತಡೆಯುವವರಿಲ್ಲವಾಯಿತು. "ಅರಸನಿಲ್ಲದ ಸಮಯದಲ್ಲಿ ನಗರವನ್ನು ಹಗೆಗಳು ಮುತ್ತಿದರೇನೋ" ಎಂದು ಜನರೆಲ್ಲ ತಳಮಳಗೊಂಡರು. ಅದೇ ಸಮಯದಲ್ಲಿ ಹೊಳೆಕರೆಯ ಗುಂಪಿನಲ್ಲಿಯೂ ಕೆಲಕೆಲವು ವೀರಪುರುಷರು ಅಲ್ಲಲ್ಲೇ ತುಂಟತನ ಮಾಡತೊಡಗಿದರು. ಜನ ರಕ್ಷಣೆಗಾಗಿ ಅತ್ತಿತ್ತ ಓಡಾಡುತ್ತಿದ್ದರು.

ಆಗ ಪ್ರದ್ಯೋತನನು ಬೇರೆ ಏನೂ ಮಾಡಲರಿಯದೆ ಆನೆಗಳನ್ನು ಕೋಟೆಯಂತೆ ಸುತ್ತಲೂ ನಿಲ್ಲಿಸಿ ಅಂತಃಪುರದವರನ್ನು ಅಲ್ಲಿಗೆ ಕರಸಿದನು. ಆಗ ಯೂಗಿಯ ಕಡೆಯ ಭಟರು ಎಲ್ಲೋ ನಗಾರಿ ಬಾರಿಸಿದರು. ಊರ ಕಡೆ ಬೆಂಕಿಯನ್ನು ಕಂಡೂ ಈ ನಗಾರಿಯ ಮೊಳಗನ್ನು ಕೇಳಿಯೂ ಆನೆ

ಗಳು ನೆಲೆಕಲಕಿ ಗುಂಪಿನ ಮೇಲೆ ನುಗ್ಗಿ ಬಂದವು. ಅವನ್ನು ಅಡಗಿಸಿಡು ವುದೇ ಬಹು ಕಷ್ಟವಾಯಿತು.

ವಾಸವದತ್ತೆ ಎಲ್ಲಿಯೋ ಬೇರೆ ಕಡೆ ಸಖಿಯರೊಡನೆ ಹೋಗಿದ್ದುದನ್ನು ನೆನೆದು ಪ್ರದ್ಯೋತನನು, "ನನ್ನ ಮಗಳು ವಾಸವದತ್ತೆಯನ್ನು ರಕ್ಷಣೆ ಮಾಡುವುದು ನಿನ್ನ ಕರ್ತವ್ಯವೆಂದು ನಾನು ಹೇಳಿದ್ದಾಗಿ ಉದಯನನಿಗೆ ತಿಳಿಸಿರಿ" ಎಂದು ಸೇವಕರನ್ನೋಡಿಸಿದನು. ಅವರು ಬಂದು ತಿಳಿಸಲು "ವಾಸವದತ್ತೆಯನ್ನು ಕಾಪಾಡುವುದು ನನ್ನ ಭಾರ. ಇದಕ್ಕಾಗಿ ಸ್ವಲ್ಪವೂ ಚಿಂತಿಸಬಾರದು" ಎಂದು ಸಮಾಧಾನ ಹೇಳಿ ಕಳಿಸಿದನು. ಆ ಮೇಲೆ ವಾಸವದತ್ತೆಯಿದ್ದ ಸ್ನಾನಘಟ್ಟದ ಬಳಿ ಹೋದನು.

ಅಲ್ಲಿದ್ದ ಕಾಪಿನವರು ಅವನನ್ನು ಕಂಡು, "ಬೆಂಕಿಯುರಿಯುತ್ತಿರುವು ದರಿಂದ ಇವೊತ್ತು ನಗರಕ್ಕೆ ಹೋಗುವ ಹಾಗಿಲ್ಲ. ವಾಹನಗಳೂ ಸುಕರ ವಾಗಿಲ್ಲ. ನಿಮ್ಮ ಶಿಷ್ಯೆಯನ್ನು ಆನೆಯ ಮೇಲೆ ಹತ್ತಿಸಿಕೊಂಡು ಕಾಪಾಡ ಬೇಕು" ಎಂದು ಕೇಳಿಕೊಂಡರು. ಉದಯನನಿಗೆ ಪರಮಾನಂದವಾಯಿತು. ಆದರೂ ಅದನ್ನು ಹೊರಪಡಿಸದೆ ಅಡಗಿಸಿಕೊಂಡನು. ಉದಯನನ ಬಳಿ ಹೋಗಲು ಆಸೆಪಟ್ಟು ನಿಂತಿದ್ದ ವಾಸವದತ್ತೆಯನ್ನು ಕಾಂಚನಮಾಲೆ ಆಸರೆ ಕೊಟ್ಟು ಮೆಲ್ಲನೆ ಆನೆಯ ಮೇಲೆ ಹತ್ತಿಸಿದಳು. ಉದಯನನು ಕೈ ನೀಡಿ ಅವಳನ್ನು ಮೇಲೆತ್ತಿಕೊಂಡನು. ಬಳಿಕ ಕಾಂಚನಮಾಲೆಯೂ ಆನೆಯ ನ್ನೇರಿ, ತನ್ನ ಕೈಯಲ್ಲಿದ್ದ ಘೋಷವತಿಯನ್ನು ವಸಂತಕನ ವಶಕ್ಕೆ ಕೊಟ್ಟು, ಪಿಡಿಯ ವೇಗಕ್ಕೆ ನಡುಗುತ್ತಿದ್ದ ವಾಸವದತ್ತೆಯನ್ನು ತಬ್ಬಿಕೊಂಡು ಕುಳಿತಳು.

ವಾಸವದತ್ತೆಯನ್ನು ನೋಡಲೆಂದು ಶಾಂಕಿಯ ತಾಯಿ ಆ ಬಳಿ ಬಂದಳು. ಯೂಗಿಯ ಗುರುತು ತಿಳಿಸಿ, ಅವನ ಬಳಿ ಹೋಗಿ ತೋರಿಸು ವಂತೆ ಸೂಚಿಸಿ ಮೊದಲೇ ಬರೆದಿಟ್ಟುಕೊಂಡಿದ್ದ ಓಲೆಯೊಂದನ್ನು ಉದಯ ನನು ಅವಳಿಗೆ ತಲುಪಿಸಿದನು. ಆಕೆ ಅವನ ಸನ್ನೆಯನ್ನರಿತು, ವಾಸವ ದತ್ತೆಯ ಅಗಲಿಕೆಯನ್ನು ತಾಳಲಾರದವಳಾದರೂ ಕಷ್ಟದಿಂದ ಮನಸ್ಸು ಗಟ್ಟಿಮಾಡಿಕೊಂಡು ಹೊರಟು ಹೋದಳು.

ಆಮೇಲೆ ಉದಯನನು ಭದ್ರಾವತಿಯನ್ನು ಪ್ರೀತಿಯಿಂದ ಮೈತಡವಿ, "ನಿಮ್ಮ ಜಾತಿಯಲ್ಲಿ ನನಗಿರುವ ಪ್ರೀತಿಯಿಂದ ನಾನು ಸೆರೆಸಿಕ್ಕಿದೆನು. ನಳಗಿರಿಯಿಂದ ಆ ದುಃಖ ಪರಿಹಾರವಾಯಿತು. ಈಗ ಅವಳಿಗಾಗಿ ದುಃಖ ದಲ್ಲಿ ಸಿಕ್ಕಿದ್ದೇನೆ. ಇದನ್ನು ಪರಿಹರಿಸುವುದು ನಿನಗೆ ಸೇರಿದ್ದು. ಅದಕ್ಕಾಗಿ ಬಹು ಬೇಗ ನಡೆದು ಇಂದೇ ನನ್ನನ್ನು ಗಡಿ ದಾಟಿಸು" ಎಂದು ಅದರ ಕಿವಿ ಯಲ್ಲಿ ನುಡಿದು ನಡೆಸಿದನು. ಹಾಗೆ ನಡೆಸಲಿರುವಷ್ಟರಲ್ಲಿ ವರಾಹನೆಂಬ ವೀರನು ಬಿಲ್ಲುಬಾಣ ಹಿಡಿದು ಅಲ್ಲಿಗೆ ಬಂದನು. ಅವನನ್ನು ಹತ್ತಿರ ಕರೆದು ಉದಯನನು, "ವರಾಹಾ, ನೀನು ಅಂಜಬೇಡ. ಇಲ್ಲಿ ಸುತ್ತಲೂ ಬಳಸಿರು ವವರು ಕಳ್ಳರಾಗಿದ್ದರೂ ಇರಬಹುದು. ನಿನ್ನ ಅಂಬುಬಿಲ್ಲುಗಳನ್ನು ಇಲ್ಲಿ ಕೊಡು. ಆನೆಯನ್ನೇರಿ ನನ್ನ ಕತ್ತಿಯನ್ನು ಹಿಡಿದುಕೊಂಡು ಜೊತೆಯಲ್ಲಿ ಬಾ" ಎಂದನು. ವರಾಹ ಬಿಲ್ಲಂಬುಗಳನ್ನು ಕೊಟ್ಟ ಮೇಲೆ ಹತ್ತಬೇಕೆ ನ್ನುತ್ತಿರುವಷ್ಟರಲ್ಲಿ ಆನೆ ಮುಂದುವರಿಯಿತು.

ಕಾವಲಿನವರಿಗೆ ಆಗ ಉದಯನನ ಎಣಿಕೆ ಮನಸ್ಸಿಗೆ ಹೊಳೆಯಿತು. "ಅಯ್ಯೋ! ವತ್ಸವನ ಮನಸ್ಸನ್ನರಿಯದೆ, ನಾವಾಗಿಯೇ, ವಾಸವದತ್ತೆ ಯನ್ನು ಅವನಿಗೆ ಒಪ್ಪಿಸಿಬಿಟ್ಟೆವಲ್ಲಾ! ನಮ್ಮರಸನಿಗೆ ಏನು ಹೇಳುವುದು?" ಎಂದು ಯೋಚಿಸಿ ಅಂಜಿ, ನಾಚಿ ಕಳವಳಪಡುತ್ತ ನಿಂತರು.

## ೧೮ ಪಲಾಯನ

ಉದಯನನು ಆನೆಯನ್ನು ಎತ್ತಲೋ ನಡೆಸುತ್ತಿರುವುದನ್ನು ಕಂಡ ಪ್ರದ್ಯೋತನನ ವೀರರು ತಡೆಯ ಬಂದರು. ಯೂಗಿ ಮೊದಲೆ ಮರಸಿ ನಿಲ್ಲಿಸಿದ್ದ ಭಟರು ತಟ್ಟನೆ ಹೊರ ಬಂದು ಅವರನ್ನು ಎದುರಿಸಿದರು. ಯೂಗಿಯೂ ತನ್ನ ಸಹಜಸ್ವರೂಪದಿಂದಲೇ ಕಾಣಿಸಿಕೊಂಡು ಕತ್ತಿ ಹಿರಿದು ಬಂದು ಅವರೊಡನೆ ಸೇರಿಕೊಂಡನು. ಅತಿವೇಗವಾಗಿ ಉದಯನನ ಬಳಿ ಹೋಗಿ ಭದ್ರಾವತಿಗೆ ಪ್ರದಕ್ಷಿಣೆಮಾಡಿ ಸ್ತುತಿಸಿ, "ನಿಮ್ಮ ಜಾತಿಯಲ್ಲಿರುವ ಪ್ರೀತಿಯಿಂದ ನಮ್ಮೊಡೆಯನಿಗೆ ವ್ಯಥೆಯುಂಟಾಯಿತು. ಅದನ್ನು ನೀನು

ಪರಿಹರಿಸು. ಎಲ್ಲಿಯೂ ನಿಲ್ಲದೆ ಓಡಿ ನಡೆದು ನಮ್ಮ ನಾಡಿಗೆ ತಲುಪಿಸು" ಎಂದು ನುಡಿದು ಅದರ ಕಿವಿಯಲ್ಲಿ ಒಂದು ಮಂತ್ರವನ್ನು ಜಪಿಸಿದನು. ಉದಯನನು ಶಾಂಕಿಯ ತಾಯಿಯ ಗುರುತುಗಳನ್ನು ತಿಳಿಸಿ, ಅವಳನ್ನು ಎಂದಿಗೂ ಕೈಬಿಡದೆ ಕರೆತರಬೇಕೆಂದು ಬರೆದಿದ್ದ ಓಲೆಯನ್ನು ಯೂಗಿಯ ಕೈಸೇರಿಸುವಂತೆ ಮಾಡಿದನು.

ಹೀಗೆ ಈಶಾನ್ಯ ದಿಕ್ಕಿಗೆ ತಿರುಗಿ ಪಿಡಿಯನ್ನು ನಡೆಸುತ್ತಿರಲು ವರಾಹನು ಮತ್ತೆ ಹಿಂದೊಡರಿ ಬಂದು ತಡೆದನು. ಉದಯನನು ಅವನನ್ನು ಕುರಿತು, "ವರಾಹಾ ! ಅವಂತೀಶ್ವರನ ಬಳಿ ಹೋಗಿ ನಾನು ಹೇಳಿದೆನೆಂದು ಹೀಗೆ ಬಿನ್ನವಿಸು : 'ಕಾಪಾಡಿಕೊಂಡು ಬರಬೇಕೆಂದು ವಾಸವದತ್ತೆಯನ್ನು ನನ್ನ ವಶಕ್ಕೆ ಪ್ರೀತಿಯಿಂದ ಒಪ್ಪಿಸಿದಿರಿ. ಆದ್ದರಿಂದ ನಾನು ಇವಳನ್ನು ಕರೆದು ಕೊಂಡು ನನ್ನ ನಾಡಿಗೆ ಹೋಗುತ್ತಿದ್ದೇನೆ.' ಎಂದು ಹೇಳಿ ನನ್ನ ನಮ ಸ್ಕಾರಗಳನ್ನು ತಿಳಿಸು." ಎಂದನು. ಹಾಲಿನಲ್ಲಿ ಜೇನು ಕಲಸಿದಂಥ ಈ ನುಡಿಗಳನ್ನು ಕೇಳಿ ಅವನು ಬೆರಗಾಗಿ ನಿಂತನು. ಮತ್ತೆ ಅವನು ಹಿಂಬಾ ಲಿಸಲಾಗದಂತೆ ಭದ್ರಾವತಿ ವೇಗವಾಗಿ ಮುಂದುವರಿಯಿತು.

ವಾಸವದತ್ತೆಗೆ ನಿಜಸ್ಥಿತಿ ಅರಿವಾದದ್ದು ಆಗಲೇ. ಉದಯನನು ತನ್ನನ್ನು ತಂದೆತಾಯಿಗಳಿರುವಲ್ಲಿಗೆ ಕರೆದುಕೊಂಡು ಹೋಗುವನೆಂದು ಕೊಂಡಿದ್ದಳು. ಈಗ ಅವರನ್ನಗಲಿ ಹೋಗಬೇಕಾಯಿತೆಂದು ದುಃಖ ಒತ್ತರಿಸಿ ಬಂತು. "ಕಾಂಚನೇ, ನನ್ನ ಕೈ ಹಿಡಿದುಕೊಂಡು ಕೆಳಗಿಳಿದು ಬಿಡು" ಎಂದು ಹೇಳಿ ಭಯಗೊಂಡು ಅಳತೊಡಗಿದಳು. ತಾನೆಣಿಸಿದ್ದನ್ನು ಮಾಡಿ ಮುಗಿಸಿ ನಲಿಯುತ್ತಿರುವ ಉದಯನನ್ನು ಕುರಿತು ಕಾಂಚನಮಾ ಲೆಯು, "ಅರಸೇ ! ನೀನು ಏನು ಮಾಡಿಬಿಟ್ಟೆ ! ನಮ್ಮ ದೊರೆಮಗಳು ಹೆದರಿ ನಡುಗುತ್ತಿದ್ದಾಳೆ. ಬೆಂಬತ್ತಿ ದೊಡ್ಡ ಪಡೆ ಬರುವುದನ್ನೂ ಗಣಿಸದೆ ಹೀಗೆ ಮಾಡಿದೆಯಲ್ಲಾ !" ಎಂದು ನುಡಿದು ಕೊರಗಿದಳು. "ನೀವು ದಿಗಿಲು ಪಡಬೇಡಿ. ಅರಸನು ಇವಳನ್ನು ನನಗೆ ಒಪ್ಪಿಸಿ ಕೊಟ್ಟಿರುವುದನ್ನು ಈ ವೀರರು ಅರಿಯರು. ಅದರಿಂದ ಹೋರಾಡಬರುತ್ತಾರೆ. ಆದರೆ ಅವರನ್ನು ಗೆಲ್ಲುವುದು ನನಗೆ ಬಹು ಸುಲಭ. ಅಂಜಬೇಡಿ" ಎಂದು ಧೈರ್ಯ ಹೇಳಿದನು. ವಾಸವದತ್ತೆ ತವರು ಮನೆಯನ್ನು ತೊರೆಯುವ ದುಃಖ ನಲ್ಲನ ಒಲವಿನ

ಸುಖ ಎರಡರ ನಡುವೆ ಸಿಕ್ಕಿ ವಿಚಿತ್ರವಾದ ಕಳವಳವನ್ನು ಅನುಭವಿಸಿದಳು. ಕಡೆಗೆ ಹೇಗೋ ಮನಸ್ಸಮಾಧಾನ ಮಾಡಿಕೊಂಡಳು.

## ೧೯ ಪಲಾಯನದ ಅನಂತರ

ಉದಯನನು ವಾಸವದತ್ತೆಯನ್ನು ಹರಣಮಾಡಿಕೊಂಡು ಹೋಗು ವುದನ್ನು ಕಂಡ ಜನರೆಲ್ಲ, "ಇನ್ನೇನು ಗತಿ! ಮುಂದೆ ಏನೇನಾಗುವುದೋ!" ಎಂದು ತಲ್ಲಣಿಸಿದರು; ಹಗಲು ಹೊತ್ತೇ ಸೂರ್ಯನನ್ನು ಕಳೆದುಕೊಂಡವರಂತೆ ಬಹಳ ಅಂಜಿದರು. ಗೆಳತಿಯರೂ ದಾದಿಯರೂ ವಾಸವದತ್ತೆಯ ಕಾರ್ಯ ಗಳನ್ನೂ ಗುಣಗಳನ್ನೂ ನೆನೆನೆನೆದು ಹೇಳಿಕೊಂಡು ಹಲುಬುತ್ತಿದ್ದರು.

ನಡೆದ ಸಂಗತಿಯನ್ನು ದೊರೆಗೆ ತಿಳಿಸಲಂಜಿ ಕೈ ಕೈ ಹಿಸುಕಿಕೊಂಡು ಭಟರು ಅತ್ತಿತ್ತ ಸುತ್ತಾಡತೊಡಗಿದರು. ವೈಗಾವಲು ದಳದ ವರಾಹನು ಮಾತ್ರ ಕರ್ತವ್ಯಪರನಾಗಿ ಪ್ರದ್ಯೋತನನ್ನು ಕಾಣಲು ಹೋದನು. ಆಗ ದೊರೆ ಜೋಯಿಸನೊಬ್ಬನು ಭವಿಷ್ಯ ಹೇಳುವುದನ್ನು ಕೇಳುತ್ತ ಕುಳಿತಿದ್ದನು. "ಶಕುನಗಳನ್ನು ನೋಡಿದ್ದರಲ್ಲಿ, ಮೊದಲು ನಿಮಗೆ ದುಃಖ, ಬಳಿಕ ಎಣೆ ಯಿಲ್ಲದ ಸುಖದೊರೆಯುವುದೆಂದು ವ್ಯಕ್ತವಾಗುತ್ತದೆ." ಎಂದು ಆತನೆಂದನು. ಹಾಗೆಂದು ಆತ ನುಡಿದನೋ ಇಲ್ಲವೋ, ವರಾಹನು ಅವಸರದ ಸುದ್ದಿ ಯನ್ನು ಅರಿಕೆ ಮಾಡಲು ಬಂದಿರುವುದಾಗಿ ಹರಿಕಾರನು ಬಂದು ತಿಳಿಸಿದನು. ಒಳಕ್ಕೆ ಕರೆಸಿ ಕೇಳಲು ವರಾಹನು ಅಂಜುತ್ತಂಜುತ್ತ ನಡೆದದ್ದೆಲ್ಲವನ್ನೂ ಬಿನ್ನಹ ಮಾಡಿದನು. "ವಾಸವದತ್ತೆಯೊಡನೆ ಆನೆಯನ್ನು ಎತ್ತಲೊ ನಡೆಸುವುದನ್ನು ಕಂಡು ನಾವು ಉದಯನನ್ನು ಅಡ್ಡಗಟ್ಟಿದೆವು. ತಡೆದೊ ಡನೆ ಅವನ ಕಡೆಯ ವೀರರು, ಅದೆಲ್ಲಡಗಿದ್ದರೋ ಕಾಣೆ, ಹೊರಬಂದ ನಮ್ಮ ಮೇಲೆ ಬಿದ್ದರು. ಆಗಲೂ ಅಂಜಿ ಹಿಂಜರಿಯದೆ ನಾನು ಬೆಂಬತ್ತಿ ದೆನು. ಉದಯನ ಕುಮಾರನು ನನ್ನನ್ನು ಕುರಿತು, 'ಅರಸರರಸನ ವಾಸವದತ್ತೆಯನ್ನು ನನಗೆ ಒಪ್ಪಿಸಿ ಕಳಿಸಿರುವುದರಿಂದ ಇವಳೊಡನೆ ನನ್ನ ನಾಡಿಗೆ ಹೋಗುತ್ತೇನೆ. ನನ್ನ ನಮಸ್ಕಾರಗಳನ್ನು ಅವರಿಗೆ ತಿಳಿಸು' ಎಂದ

ನುಡಿದು ನೀವಿರುವ ದಿಕ್ಕಿಗೆ ಮಣಿದು, ವೇಗದಿಂದ ಭದ್ರಾವತಿಯನ್ನು ನಡೆಸಿಕೊಂಡು ಹೋದನು. ಮುಂದೇನಾಗಬೇಕೋ ಅಪ್ಪಣೆ ದಯಪಾಲಿಸಬೇಕು" ಎಂದು ಹೇಳಿಕೊಂಡನು.

ಕೇಳಿದೊಡನೆ ಪ್ರದ್ಯೋತನನ ಕಣ್ಣುಗಳು ಕೆಂಡವಾದವು. ಬಳಸಿದ್ದ ಮಂತ್ರಿ ಪರಿವಾರದವರನ್ನು ಸುಟ್ಟುಬಿಡುವಂತೆ ನೋಡಿ ರೋಷದಿಂದ, "ಈ ಪುಣ್ಯೋತ್ಸವ ಸಮಯದಲ್ಲಿ ನಾವು ಎಚ್ಚರ ತಪ್ಪಿರುವುದನ್ನು ಕಂಡು ವತ್ಸರಾಜ ಇಂಥ ಕೆಲಸ ಮಾಡಿದನೆ ? ಹೀಗೆ ನಮ್ಮನ್ನು ಅವಗಣಿಸಿ ಹೋದ ಹಗೆಯನ್ನು ಕೂಡಲೇ ಹಿಡಿದು ತರತಕ್ಕದ್ದು" ಎಂದು ಸೇನಾನಾಯಕರಿಗೆ ಅಪ್ಪಣೆ ಮಾಡಿದನು. ಅವರು ಹೊರಡಲು ಸಿದ್ಧರಾದರು.

ಶಾಲಂಕಾಯ ಮಂತ್ರಿ ಇದನ್ನು ಅನುಮೋದಿಸಲಿಲ್ಲ. "ಮಹಾರಾಜ, ಉದಯನಕುಮಾರನು ವಾಸವದತ್ತೆಯನ್ನು ಹರಣ ಮಾಡಿಕೊಂಡು ಹೋದದ್ದು ತಪ್ಪಾಗಿ ಕಾಣುವುದಿಲ್ಲ. ಕುಲಶೀಲಗಳಲ್ಲಿ ಅವನು ನಿಮ್ಮೊಡನೆ ಸರಿದೊರೆಯಾಗಿದ್ದಾನೆ ; ಕೊಳುಕೊಡೆಗೆ ತಕ್ಕವನಾಗಿದ್ದಾನೆ. ವಾಸವದತ್ತೆಗೆ ಅಂಥ ಅನುರೂಪನಾದ ವರನನ್ನು ದೇವರೇ ಅನುಗ್ರಹಿಸಿದಂತಾಯಿತು. ಇದು ನಮ್ಮ ಭಾಗ್ಯವೆಂದು ಭಾವಿಸಬೇಕು. ಸಿಟ್ಟು ಮಾಡಬಾರದು." ಎಂದು ತಿಳಿಯಹೇಳಿದನು.

ಮಂತ್ರಿಯ ನೀತಿ ವಚನಗಳಿಂದ ಆರಸನ ಕೋಪ ಕರಗಿತು. ಬಳಿಕ ಮಹಾದೇವಿಗೆ ತಾನೇ ಮೊದಲು ಈ ಸುದ್ದಿಯನ್ನು ತಿಳಿಸುವುದು ಮೇಲೆಂದು ಯೋಚಿಸಿ ಆಕೆಯ ಬಳಿ ಹೋದನು. ಹೋಗಿ ಮಾತಿನ ನಡುವೆ, "ದತ್ತೆಯನ್ನು ಉದಯನನಿಗೆ ಮದುವೆ ಮಾಡಿಕೊಟ್ಟು ಅವನನ್ನು ಕೌಶಾಂಬಿಗೆ ಕಳಿಸಬೇಕೆಂದಿದ್ದೇನೆ. ಇದು ನಿನಗೆ ಸಮ್ಮತವೆ ?" ಎಂದು ಕೇಳಿದನು. ಆಕೆಯ ಮುಖ ಸಲವಿನಿಂದ ಕಳೆಯೇರಿತು. "ನಳಗಿರಿಯನ್ನು ಅಡಗಿಸಿದಂದೇ, ಅವನ ಎಳೆಯ ಪ್ರಾಯ, ಪರಾಕ್ರಮ ಮತ್ತು ಪಾಂಡಿತ್ಯಗಳನ್ನು ಕಂಡು ನಮ್ಮ ವಾಸವದತ್ತೆಗೆ ಅವನೇ ತಕ್ಕವನೆಂದು ಮನವರಿಕೆಯಾಯಿತು. ಹೀಗೆ ಮಾಡುವುದು ನನಗೆ ಬಹಳ ಪ್ರೀತಿ" ಎಂದಳು. ಆಗ ದೊರೆ ಧೈರ್ಯಮಾಡಿ ನಡೆದ ಸಂಗತಿಯನ್ನು ತಿಳಿಯಪಡಿಸಿದನು. ಆ ಬಿರು

ನುಡಿಯನ್ನು ಕೇಳಿ ಆ ತಾಯಿಗೆ ಕಾದ ನಾರಾಚವನ್ನು ಕಿವಿಗೆರೆದಂತಾಯಿತು. ಮಗಳ ಅಗಲಿಕೆಯನ್ನು ತಾಳಲಾರದೆ ಪರಿಪರಿಯಲ್ಲಿ ಗೋಳಾಡಿದಳು. ಮಹಾರಾಜನು ಮೃದು ನುಡಿಗಳಿಂದ ಮೆಲ್ಲಮೆಲ್ಲನೆ ಅವಳನ್ನು ಸಂತಯಿಸಿದನು.

ಉತ್ಸವ ನಿರಾತಂಕವಾಗಿ ನಡೆಯತಕ್ಕದ್ದೆಂದು ಡಂಗುರ ಹೊಡೆದು ಸಾರಿಸಿದರು.

## ೨೦ ದಾರಿಯಲ್ಲಿ

ಮೊಟ್ಟಮೊದಲ ಅಡ್ಡಿಗಳನ್ನು ಪರಿಹರಿಸಿಕೊಂಡು ಉದಯನನು ಮುಂಬರಿಯಲು ಸ್ವಲ್ಪ ತಡವಾಯಿತು. ಆಮೇಲೆ ಭದ್ರಾವತಿ ಉಜ್ಜಯಿನಿಯನ್ನು ಬಿಟ್ಟು ಎರಡು ಗಾವುದ ಹೋಗುವಷ್ಟರಲ್ಲಿ ಸೂರ್ಯಾಸ್ತವಾಯಿತು. ಸ್ವಲ್ಪ ಹೊತ್ತಿನಲ್ಲೇ ಚಂದ್ರೋದಯವಾಯಿತು. ಆನೆ ವೇಗವಾಗಿ ಓಡಿತು.

ಆ ವೇಗದಿಂದ ಮೇಲೆ ಕೂತವರಿಗೆ ಚಂದ್ರಮಂಡಲವೂ ನಕ್ಷತ್ರಗಳೂ ಆಕಾಶದಲ್ಲಿ ಒಂದು ಕಡೆ ನೆಲಸಿರದೆ ಸುತ್ತುತ್ತಿರುವ ಹಾಗೆ ಕಾಣುತ್ತಿದ್ದವು. ನೆಲದ ಮೇಲೆ ಮರಗಳೂ ಬೆಟ್ಟಗಳೂ ಮುಖ ತಾಕುವ ಹಾಗೆ ಓಡಿ ಬರುತ್ತಿರುವಂತೆ ತೋರುತ್ತಿದ್ದವು. ವಾಸವದತ್ತೆ ಅಂಜಿದಳು.

ಒಟ್ಟಾಗಿ ಹೋಗುವ ಗರುಡಪಕ್ಷಿಗಳ ರೆಕ್ಕೆಯ ಸದ್ದಿನಂತೆ ದಿಮ್ಮೆಂದು ಮೊರೆಯುವ ಆನೆಯಡಿಯ ಘೋಷ ಕೇಳದ ಹಾಗೆ ಅವಳ ಕಿವಿಗೆ ಹತ್ತಿಯನ್ನು ತುರುಕಿ ಕಾಂಚನಮಾಲೆ ಅವಳನ್ನು ತಬ್ಬಿ ಹಿಡಿದುಕೊಂಡಳು. ತಲೆ ತಿರುಗದಂತಿರಲು ನೆಲವನ್ನೂ ಆಕಾಶವನ್ನೂ ಕಣ್ಣು ಬಿಟ್ಟು ನೋಡಬೇಡವೆಂದು ಹೇಳಿದಳು. "ವಿಧಿಪ್ರಕಾರವಾಗಿ ತಂದೆ ಮದುವೆ ಮಾಡಿಕೊಡಲಿಲ್ಲವೆಂಬುದೊಂದಲ್ಲದೆ ಬೇರೆ ಏನೂ ಕೊರತೆಯಿಲ್ಲ. ನೀನು ಮೆಚ್ಚಿದ ನಿನ್ನರಸ ತಾನೇ ಬಂದು ನಿನ್ನನ್ನು ಸೇರಿದನು. ಕಳವಳಪಡಬೇಡ." ಎಂದು ಸಂತಯಿಸುತ್ತಿದ್ದಳು.

ಕ್ಷಣಕ್ಷಣಕ್ಕೆ ಆನೆಯ ವೇಗ ಹೆಚ್ಚುತ್ತಿತ್ತು: ಇಮ್ಮಡಿ ಮುಮ್ಮಡಿ ಆಗುತ್ತಿತ್ತು. ಗಳಿಗೆ ಗಳಿಗೆಗೆ ಗಾವುದಗಳು ಹಿಂದುಳಿಯುತ್ತಿದ್ದವು. ಗದ್ದೆ

ಹೊ. ಳೂ ಊರುಕೇರಿಗಳೂ ಕಾಡುಮೇಡುಗಳೂ, ಅಲ್ಲಲ್ಲಿನ ಬಗೆಬಗೆಯ ಜನಜೀ ಹಲವು ಬಗೆಯ ಚಿತ್ರಗಳೂ ಮಿಂಚಿನಂತೆ ತೋರಿ ಥಟ್ಟನೆ ಕಣ್ಮರೆಯಾ. ದ್ದವು. ಜನಗಳ ಮೃಗಪಕ್ಷಿಗಳ ಮತ್ತು ಹೊಳೆಗಾಳಿಗಳ ಬಗೆಬಗೆಯ ಘೋಷಗಳು ತಟಕ್ಕನೆ ಕಿವಿಗೆ ಬಿದ್ದು ಸ್ವಪ್ನದಲ್ಲಿಯೋ ಎಂಬಂತೆ ಆ ಕೂಡಲೆ ಅಡಗಿಹೋಗುತ್ತಿದ್ದವು. ದೊಡ್ಡ ನಗರಗಳ ಬಳಿ ಸುಳಿಯಂತೆ ಉದಯನನು ಎಚ್ಚರಿಕೆಯಿಂದ ಆನೆಯನ್ನು ನಡೆಸುತ್ತಿದ್ದನು. ಹಳ್ಳಿ ಪಟ್ಟಣ ಗಳಿಂದ ಕೂಡಿ ಜನ ತುಂಬಿದ ನಾಡು ಮುಗಿಯಿತು; ಕಾಡು ಸಿಕ್ಕಿತು. ಕಾಡು ಕಗ್ಗಾಡಾಯಿತು. ಒಂದು ಅಡವಿಯನ್ನು ದಾಟಿದರೆ ಮತ್ತೊಂದು ಅಡವಿ; ಅದರ ಮುಂದೆ ಮತ್ತೊಂದು. ಹೀಗೆ ಮುಂದುವರಿಯುತ್ತ ವಿಂಧ್ಯವನ್ನು ಸೀಳಿ ಹರಿಯುವ ನರ್ಮದೆಯನ್ನು ದಾಟಿದರು.

ನಕ್ಷತ್ರಗಳನ್ನು ನೋಡಿ ವಸಂತಕನು ಹೊತ್ತು ಗೊತ್ತುಮಾಡಿ ಹೇಳು ತ್ತಿದ್ದನು. ಅಷ್ಟರಲ್ಲಿ ಕಾಡುಬೇಡರ ನೆಲೆವನೆಯಾದ ದುರ್ಗಮಪ್ರದೇಶ ಬಂದಿತು. ಅರದ ತುದಿಯನ್ನು ಹೋಲುವ ಹರಳುಗಲ್ಲುಗಳು ಎಲ್ಲೆಲ್ಲಿಯೂ ಹರಡಿದ್ದವು. ಅಲ್ಲಲ್ಲಿ ಕುರುಚಲು ಕಾಡುಗಳಲ್ಲಿ ಕಲ್ಲು ಮರಗಳನ್ನು ಒಟ್ಟಿ ದಾರಿಯನ್ನು ಅಡ್ಡಗಟ್ಟಿದ್ದರು. ಅವು ಪ್ರಯಾಣಿಕನ್ನು ಆ ದುಷ್ಟರು ಹೊಡೆದು ಸೂರೆ ಮಾಡುವ ಸ್ಥಳಗಳು. ಆ ಭಾಗವನ್ನು ಆ ರಾತ್ರಿಯೇ ದಾಟಬಿಡಬೇಕೆಂದು ನೆನೆದು ಉದಯನನು ಆನೆಯನ್ನು ಮತ್ತೂ ವೇಗವಾಗಿ ಓಡಿಸಿದನು.

ಆಗ ಘೋಷವತಿ ಕಟ್ಟು ಹರಿದು ಬಿದ್ದುಹೋಗಿ ಒಂದು ಬಿದಿರು ಮೆಳೆಯಲ್ಲಿ ಸಿಕ್ಕಿಕೊಂಡಿತು. ವಸಂತಕನು, "ವೀಣೆ ಕೆಳಗೆ ಬಿತ್ತು; ನಿಲ್ಲಿಸು" ಎನ್ನಲು ಉದಯನನು, "ಆನೆ ಎಂಟನೂರು ಬಿಲ್ಲು ದೂರ ಬಂದು ಬಿಟ್ಟಿತು. ಈಗ ಹಿಂದೆ ಹೋಗಲಾಗುವುದಿಲ್ಲ. ಕೊಟ್ಟ ದೈವ ತಾನೇ ತಂದು ಕೊಡುತ್ತದೆ" ಎಂದು ಮರುನುಡಿದು ಮುಂದೆ ಮುಂದೆ ನಡೆಸುತ್ತಲೇ ಇದ್ದನು.

ಬೆಳಗಿನ ಜಾವವಾಗಿ ಬೆಳ್ಳಿ ಮೂಡಿತು. ಅಷ್ಟರಲ್ಲಿ ಒಂದೇ ಸಮನೆ ಓಡಿದ್ದರಿಂದ ಕಾಲವೇಗವೆಂಗ ರೋಗ ತಗುಲಿ ಆನೆ ಬಳಲಿತು; ಸೋತು ಮೆಲ್ಲನೆ ನಡೆಯತೊಡಗಿತು. ಅದನ್ನರಿತು ಉದಯನನು ವಸಂತಕನೊಡನೆ, "ಆನೆ ರೋಗದಿಂದ ಬಳಲಿತು. ಇನ್ನು ಬಿದ್ದುಬಿಡುತ್ತದೆ. ನೀನು ಕಾಂಚನೆ

ಯೊಡನೆ ಹಿಂಪಕ್ಕದಿಂದ ಇಳಿ" ಎಂದು ಹೇಳಿದನು. ಹೇಳಿ ಒಡನೆಯೇ ತಾನು ವಾಸವದತ್ತೆಯನ್ನು ತಬ್ಬಿ ಹಿಡಿದುಕೊಂಡು ತಲೆಯ ಕಡೆಯಿಂದ ಮೆಲ್ಲನೆ ಇಳಿದನು. ಎಲ್ಲರೂ ಇಳಿದರೋ ಇಲ್ಲವೋ ಆನೆ ಕೆಳಗುರುಳಿ ಬಿದ್ದುಬಿಟ್ಟಿತು.

ಅದು ಬಿದ್ದ ರೀತಿಯನ್ನು ನೋಡಿ, ಶಕುನಶಾಸ್ತ್ರದ ಪ್ರಕಾರ ಮೊದಲು ತನಗೆ ತೊಂದರೆಯಾಗುವುದೆಂದೂ, ಆ ಮೇಲೆ ಅದು ಪರಿಹಾರವಾಗಿ ತನ್ನ ಗುರಿಮುಟ್ಟುವುದು ಸಾಧ್ಯವಾಗುವುದೆಂದೂ ಉದಯನನು ತಿಳಿದುಕೊಂಡನು ಬಳಿಕ ಭದ್ರಾವತಿಯ ಹತ್ತಿರ ಹೋಗಿ ನಿಂತು ಕೊರಳ ಹಗ್ಗ, ಸಬರ, ಮೈಗಾಪು, ಸರಪಣಿ ಮೊದಲಾದ ಸಜ್ಜನ್ನು ಕಳಚಿ ತೆಗೆದಿಟ್ಟನು. ಪಕ್ಕಕ್ಕೆ ಹೋಗಿ ಅದರ ಮೈ ತಂಪಾಗುವಂತೆ ಪ್ರೀತಿಯಿಂದ ತಡವರಿಸಿದನು. ಅದರ ಕಿವಿಯಲ್ಲಿ ಪಂಚಮಂತ್ರವನ್ನುಸುರಿ, "ಈ ಜನ್ಮದಲ್ಲಿ ನನ್ನ ಕಷ್ಟವನ್ನು ಪರಿಹರಿಸಿದೆ. ಪಿಡಿಯೇ, ಮುಂದಿನ ಜನ್ಮದಲ್ಲಿಯೂ ನೀನು ನನ್ನೊಡನೆ ಸೇರಿ ಬಾಳುವಹಾಗಾಗಲಿ" ಎಂದು ಪ್ರಾರ್ಥಿಸಿದನು. ಸಂಕಟವನ್ನು ತಾಳ ಲಾರದೆ ಕಣ್ಣೀರು ಸುರಿಸಿದನು. ಬಳಿಕ ಕಾಂಚನಮಾಲೆಯನ್ನೂ ವಾಸವ ದತ್ತೆಯನ್ನೂ ವಸಂತಕನ ರಕ್ಷಣೆಯಲ್ಲಿ ಬಿಟ್ಟು, ಹತ್ತಿರದಲ್ಲಿದ್ದ ಪುಷ್ಕರಿಣಿಗೆ ಹೋಗಿ ಸ್ನಾನ ಮಾಡಿ ಆನೆಗೆ ಸದ್ಗತಿಯಾಗಲೆಂದು ಪ್ರಾರ್ಥಿಸಿ ಬಂದನು.

## ೨೧ ಬೇಡರೊಡನೆ ಕದನ

ಅವರಿನ್ನೂ ಅವಂತಿನಾಡಿನ ಎಲ್ಲೆಯನ್ನು ದಾಟಿರಲಿಲ್ಲ. ಆದರೆ ಗಡಿಯ ಹತ್ತಿರಕ್ಕೆ ಬಂದಿದ್ದರು. ನಾಡ ಸಂಧಿಯ ಆ ದಟ್ಟಡವಿ ಕಾಡುಬೇಡರ ನಿವಾಸ ಸ್ಥಾನ. ಅವರೋ ದಾರಿಕಾರರನ್ನು ಸೂರೆಮಾಡಿ ಕೊಂದಿಕ್ಕುವ ಕ್ರೂರಿ ಗಳು. ಅಂಥ ಪ್ರದೇಶದಲ್ಲಿ ಹೆಂಗಸರೊಡನೆ ಕಾಲ್ನಡಗೆಯಲ್ಲಿ ಪ್ರಯಾಣ ಮಾಡುವುದು ಬಹಳ ಅಪಾಯಕರ. ಈ ಸಂಗತಿಯನ್ನು ಜ್ಞಾಪಿಸಿ ವಸಂತ ಕನು, "ಇನ್ನು ಎರಡು ಗಾವುದ ದೂರ ನಡೆದರೆ ನಮ್ಮವರಿರುವ ನಗರಕ್ಕೆ ಹೋಗುವ ದಾರಿಗೆ ಸೇರಬಹುದು" ಎಂದನು. ಉದಯನನು ತನ್ನ ಕತ್ತಿ ಗುರಾಣಿಗಳನ್ನು ವಸಂತಕನ ಕೈಗೆ ಕೊಟ್ಟು, ಅವನ ಕೈಯಲ್ಲಿದ್ದ ಬಿಲ್ಲು

ಅಂಬುಗಳನ್ನು ತಾನು ತೆಗೆದುಕೊಂಡನು. ವಾಸವದತ್ತೆಯನ್ನೂ ಕಾಂಚನ ಮಾಲೆಯನ್ನೂ ಮೆಲ್ಲನೆ ನಡೆಸಿಕೊಂಡು ಮುಂದೆ ಹೊರಟರು.

ಮುಂದೆ ಉದಯನ, ಹಿಂದೆ ವಸಂತಕ, ನಡುವೆ ವಾಸವದತ್ತೆ, ಅವಳ ಪಕ್ಕದಲ್ಲಿ ಕಾಂಚನಮಾಲೆ–ಹೀಗೆ ಮುಂದುವರಿದರು. ಅರಮನೆಯ ಉದ್ಯಾನ ದಲ್ಲಲ್ಲದೆ ಬೇರೆ ಕಡೆ ನಡೆದರಿಯದ ಚಕ್ರವರ್ತಿಪುತ್ರಿ ಈ ಕಗ್ಗಾಡಿನಲ್ಲಿ ಕಲ್ಲು ಮುಳ್ಳಿನ ಮೇಲೆ ನಡೆಯತೊಡಗಿದಳು. ಉದಯನನ ಮೇಲಿನ ಪ್ರೀತಿಯಿಂದ ತನ್ನ ಬಳಲಿಕೆಯನ್ನೂ ಗಣಿಸದೆ ಉತ್ಸಾಹದಿಂದ ನಡೆದಳು ; ಬೇಗ ಬೇಗ ನಡೆದಳು. ಸ್ವಲ್ಪ ಹೊತ್ತು ನಡೆಯುವುದರಲ್ಲಿ ಆ ಕೋಮ ಲೆಯ ಕಾಲಿನಲ್ಲಿ ಹೊಪ್ಪಳೆ ಬಂದು ನೊಂದು ನಿಂತಳು. ಆದರೂ ಮುಂದುವರಿದಳು.

ಅದನ್ನರಿತ ಉದಯನನು, "ಇವಳು ನೊಂದಳು. ಇನ್ನು ಮರೆಯಾಗಿ ತಂಗಬಹುದಾದ ಸ್ಥಳವನ್ನು ಹುಡುಕು" ಎಂದು ವಸಂತಕನಿಗೆ ಹೇಳಿದನು. ಅವನು ಅಲ್ಲಲ್ಲೇ ಸುಳಿದು ನೋಡಿದನು. ಸ್ವಲ್ಪ ದೂರದಲ್ಲಿ ಒಂದು ಕೊಳವೂ ಅದರ ದಡದಲ್ಲಿ ದಟ್ಟವಾಗಿ ಹಬ್ಬಿದ್ದ ಮುಳ್ಳಿಲವ ಮರಗಳ ಗುಂಪು ಕಾಣಿಸಿತು. ಆ ಮರಗುಂಪಿನೊಳಗೆ ಹೊರಗಿನವರಿಗೆ ಕಾಣದಂತೆ ಅಡಗಿರಲು ಎಡೆಯಿತ್ತು. ಅದನ್ನರಿತು ಬಂದು ತಿಳಿಸಲು ನಾಲ್ವರೂ ಅತ್ತ ಹೊರಟರು. ಅಲ್ಲಿ ಹೋಗಿ, ಮುಳ್ಳು ಕಲ್ಲುಗಳನ್ನು ಎತ್ತಿ ಹಾಕಿ ಗುಡಿಸಿ ಚೊಕ್ಕಟಮಾಡಿ, ವಾಸವದತ್ತೆ ಯನ್ನು ಅಲ್ಲಿ ಮಲಗಿಸಿದರು. ಅವಳಿಗೆ ಗಾಢವಾಗಿ ನಿದ್ದೆ ಹತ್ತಿತು. ಕಾಂಚನಮಾಲೆಯನ್ನು ಅವಳ ಬಳಿ ಬಿಟ್ಟು ಇಬ್ಬರೂ ಹೊರಗೆ ಕಾವಲು ನಿಂತರು.

ಹಗಲು ಹೇಗೋ ಕಳೆಯಿತು ; ದಾರಿ ಮಾತ್ರ ಸಾಗಿರಲಿಲ್ಲ, ವಸಂತಕ ನಿಗೆ ಒಂದು ಹಂಚಿಕೆ ಹೊಳೆಯಿತು. "ಅರಸಾ, ರುಮಣ್ವಂತನಿರುವ ಜಯಂತೀನಗರ ಇಲ್ಲಿಗೆ ಬಹು ದೂರ. ಯೂಗಿಗೆ ಕಾಲಕಾಲಕ್ಕೆ ನೆರವು ಕೊಡುತ್ತಿರುವ ವೃಷಭಕನ ಪುಷ್ಪಕ ನಗರ ಹತ್ತಿರವೇ ಇರುವಂತಿದೆ. ನಾನು ಈಗಲೇ ಹೊರಟು ಬೇಗ ಹೋಗಿ ಸೇನೆಯೊಡನೆ ಬೆಳಗ್ಗೆ ಬಂದುಬಿಡುತ್ತೇನೆ" ಎಂದನು. ಉದಯನನು ಒಪ್ಪಿ, ವೃಷಭಕನಿಗೆ ನಂಬಿಕೆ ಹುಟ್ಟಿಸತಕ್ಕ

ಕೆಲವು ರಹಸ್ಯ ಸಂಗತಿಗಳನ್ನು ವಸಂತಕನಿಗೆ ತಿಳಿಸಿ ಅವನನ್ನು ಕಳಿಸಿ ಕೊಟ್ಟನು.

ಬೆಳಗಾಯಿತು. ಭದ್ರಾವತಿ ನಡೆದು ಬಂದ ಕಾಡುದಾರಿಯ ಅಕ್ಕಪಕ್ಕಗಳಲ್ಲಿದ್ದ ಹಳ್ಳಿಗಳ ಶಬರರು ತಮ್ಮ ನಿತ್ಯಕಾರ್ಯಗಳಲ್ಲಿ ತೊಡಗಿರುವಾಗ ಆನೆ ಹೋದ ಹೆಜ್ಜೆಗುರುತನ್ನು ಕಂಡರು. ಅದನ್ನು ಚೆನ್ನಾಗಿ ಪರೀಕ್ಷಿಸಿ, "ಇದು ಕಾಡಾನೆಯಲ್ಲ; ನಾಡಾನೆ ಎಂದು ನಿರ್ಧರಿಸಿ, ಅದೇ ಜಾಡು ಹಿಡಿದು ನಡೆದರು. ಕಡೆಗೆ ಆನೆ ಬಿದ್ದ ಬಳಿ ಬಂದು ಸೇರಿದರು. ಜನ ಯಾರೂ ಇಲ್ಲದ್ದರಿಂದ ಬೇಸರಗೊಂಡರು. ಆ ಬಳಿಕ ಜನರ ಹೆಜ್ಜೆ ಗುರುತುಗಳನ್ನು ಕಂಡು, "ಈ ಆನೆಯ ಮೇಲೆ ಬಂದವರು ಬಹು ದೂರ ಹೋಗಿರಲಾರರು. ಹುಡುಕಿ ಹಿಡಿಯಬೇಕು" ಎಂದು ನಿರ್ಧರಿಸಿ ಗುಂಪಾಗಿ ಮುನ್ನುಗ್ಗಿದರು.

ಅಕ್ಕಪಕ್ಕಗಳಲ್ಲಿ ಹರಡಿಕೊಂಡ ಮರಗುಂಪುಗಳಲ್ಲಿ, ಗವಿಗಳಲ್ಲಿ, ಬಿದಿರ ಮೆಳೆಗಳಲ್ಲಿ, ಹಳ್ಳಕೊಳ್ಳಗಳಲ್ಲಿ, ದೊಡ್ಡ ಮರಗಳ ಪೊಟರೆಗಳಲ್ಲಿ—ಹೀಗೆ ಎಲ್ಲೆಲ್ಲಿ ಜನ ಅಡಗಿಕೊಂಡಿರಬಹುದೋ ಅಂಥ ಕಡೆಗಳನ್ನೆಲ್ಲಾ ಹೊಕ್ಕು ಹೊಕ್ಕು ಹುಡುಕುತ್ತಿದ್ದರು. ಸುತ್ತಲೂ ಕಣ್ಣಿಟ್ಟು ಹುಡುಕುತ್ತಿರುವಾಗ ಬಿಲ್ಲು ಹಿಡಿದು ನಿಂತಿದ್ದ ಉದಯನನನ್ನು ದೂರದಲ್ಲಿ ಕಂಡರು. ಕೂಡಲೆ ಬಗೆ ಬಗೆಯಾಗಿ ಕೂಗೆಬ್ಬಿಸಿದರು. ಆ ಬಳಿ ಹೋಗಿ, ನಾಲ್ಕು—ಕಡೆಯಲ್ಲೂ ಸುತ್ತುಗಟ್ಟಿ ಮುತ್ತಿ ಮೇಲೆ ಬಿದ್ದರು.

ಅದನ್ನು ಕಂಡು ಉದಯನನು ವಾಸವದತ್ತೆಗೂ ಕಾಂಚನಮಾಲೆಗೂ ಧೈರ್ಯಹೇಳಿ ಹೊರಬಂದು ಬೇಡರ ಕಡೆ ತಿರುಗಿದನು. ಒಂದು ಮರದ ಬುಡದಲ್ಲಿ ನಿಂತು ಬಿಲ್ಲುಬಗ್ಗಿಸಿ ಅಂಬುಸುರಿಯತೊಡಗಿದನು. ಅದನ್ನು ಲಕ್ಷಿಸದೆ ಮುನ್ನುಗ್ಗಿ ಬಂದ ಸಾಹಸಿಗಳು ಕಣೆ ನಾಟಿ ಕೆಳಗೆ ಬಿದ್ದರು. ಬೇಡರೂ ಉದಯನನ ಮೇಲೆ ಕಲ್ಲು ಬೀರುತ್ತಲೂ ಬಾಣ ಹೊಡೆಯುತ್ತಲೂ ಮೇಲೆ ಮೇಲೆ ನುಗ್ಗಿ ಬರುತ್ತಲೇ ಇದ್ದರು. ಆದರೂ ಉದಯನನ ಕೂರಂಬುಗಳಿಗೆ ಬಲಿಯಾಗಿ ತಮ್ಮವರು ಬೇಗಬೇಗ ಉರುಳುವುದನ್ನು ಕಂಡು ಹಿಂಜರಿದರು.

ಕ್ಷಣ ಮಾತ್ರ ಅವರು ಏನೂ ತೋರದೆ ನಿಂತರು. ಮುದಿ ಬೇಡನೊಬ್ಬನು ಆ ಎಲವದ ತೋಪಿಗೆ ಬೆಂಕಿಯಿಡುವಂತೆ ಸಲಹೆ ಮಾಡಿದನು.

ಒಡನೆಯೇ ಅವರು ನಾಲ್ಕು ಕಡೆಯೂ ಬೆಂಕಿ ಹೊತ್ತಿಸಿ ಬಳಸಿ ನಿಂತರು. ಬೇರೆ ಏನೂ ಮಾಡಲರಿಯದೆ ಉದಯನನು ವಾಸವದತ್ತೆಯನ್ನೂ ಕಾಂಚನ ಮಾಲೆಯನ್ನೂ ಕರೆದುಕೊಂಡು ಮೆಳೆಯಿಂದ ಹೊರಬಂದನು ; ಬಂದು ಆ ಬೇಡರೆದುರಿಗೇ ಅವರನ್ನು ಮೆಲ್ಲನೆ ನಡೆಸಿಕೊಂಡು ಹೊರಟನು. ಅವನ ಧೀರ ತೇಜಸ್ಸಿಗೆ ಸೂರೆಕಾರರು ಅಂಜಿ ಹಿಂಜರಿದರು.

ಕೂಡಲೇ ಮತ್ತೆ ಧೈರ್ಯಮಾಡಿ ಸುತ್ತಲೂ ಕವಿದು ಬಂದು ಒಟ್ಟಾಗಿ ಕಾದಿ ಅವನ ಬಿಲ್ಲ ನಾರಿಯನ್ನು ಕತ್ತರಿಸಿದರು. ಆಗ ಉದಯಕುಮಾರನು ಬಲೆಗೆ ಬಿದ್ದ ಸಿಂಹದಂತಾದನು. ಶಬರರ ಅಂಬುಗಳನ್ನು ತನ್ನ ಬಿಲ್ಲು ತಿರುಗಿಸುವುದರಿಂದಲೇ ತೊಲಗಿಸುತ್ತ ತಾವು ಮೂವರನ್ನು ರಕ್ಷಿಸಿಕೊಂಡು ಬರುತ್ತಿದ್ದನು. ವಾಸವದತ್ತೆಗೆ ಇನ್ನು ತಡೆಯಲಾಗಲಿಲ್ಲ. ತನ್ನ ಅಲಂಕಾರ ವನ್ನೆಲ್ಲ ಕಳಚಿ ಕಾಂಚನೆಯ ಕೈಗೆ ಕೊಟ್ಟು, ಅದನ್ನು ಬೇಡರಿಗೆ ಕೊಡು ವಂತೆ ತಿಳಿಸ ಹೇಳಿದಳು. “ನಮ್ಮನ್ನು ತೊಂದರೆಪಡಿಸಬೇಡಿ” ಎಂದು ಅವರನ್ನು ಕೇಳಿಕೊಂಡಳು.

ಅದನ್ನು ಕಂಡು ಬೇಡರು, “ನೀವು ಯಾರು ?” ಎಂದು ಕೇಳಿದರು. ಹೊತ್ತೇರುತ್ತಿದ್ದರೂ ನಿರೀಕ್ಷಿಸಿದಂತೆ ವಸಂತಕನು ಬರಲಿಲ್ಲ. ಕಾಲಹರಣ ಮಾಡಬೇಕೆಂದು ನೆನೆದು ಉದಯುನನು, “ನಾವು ಉದಯನ ರಾಜನ ವರ್ತಕರು. ಅವಂತಿ ನಾಡಿನಲ್ಲಿ ಸಂಪಾದಿಸಿದ ಸಂಪತ್ತನ್ನು ಹೇರಿಕೊಂಡು ಬರುತ್ತಿದ್ದೆವು. ದಾರಿಯಲ್ಲಿ ಆನೆ ಸತ್ತು ಬಿದ್ದಿತು. ಸಂಪತ್ತನ್ನೆಲ್ಲ ಮುಚ್ಚಿಟ್ಟ ದ್ದೇವೆ. ಅದು ನಿಮಗೆ ಬೇಕಾಗಿದ್ದರೆ ಶಾಂತರಾಗಿ ಬನ್ನಿ ; ತೋರಿಸುತ್ತೇವೆ” ಎಂದನು.

ಬೇಡನಾಯಕನು ಒಪ್ಪಿದನು. ಉದಯನು ಅವರನ್ನು ಅಲ್ಲಲ್ಲೇ ಸ್ವಲ್ಪ ಹೊತ್ತು ಸುತ್ತಿಸಿದನು. “ನೀವು ಹಾಕಿದ ಬೆಂಕಿಯಿಂದ ಗಿಡಮರಗಳು ಸುಟ್ಟುಹೋಗಿವೆ. ಹೊಗೆ ಬೇರೆ ತುಂಬಿಕೊಂಡಿದೆ. ನಾವಿಟ್ಟ ಗುರುತುಗಳು ಸರಿಯಾಗಿ ಕಾಣುವ ಹಾಗಿಲ್ಲ. ಬೆಂಕಿ ಆರಲಿ ; ಹೊಗೆ ಹೋಗಲಿ ; ತೋರಿಸುತ್ತೇವೆ. ಅದುವರೆಗೆ ಸುಮ್ಮನಿರಿ” ಎಂದನು. ಬೇಡರು, “ನಾವು ಹೇಳಿದ ಹಾಗೆ ಕೇಳದೆ ಇವರು ತಪ್ಪಿಸಿಕೊಳ್ಳಲು ದಾರಿಯಿಲ್ಲ—ಎಂದು

ಕೊಂಡರು. "ಆ ಮೇಲೆ ತೋರಿಸದಿದ್ದರೆ ನಿನ್ನನ್ನು ಕೊಂದುಬಿಡುತ್ತೇವೆ" ಎಂದು ಹೆದರಿಕೆ ಹಾಕಿ, ಸುತ್ತುಗಟ್ಟಿ ನಿಂತರು.

"ಕೊಂದು ಬಿಡುತ್ತೇವೆ" ಎಂದ ಮಾತು ಕೇಳಿ ವಾಸವದತ್ತೆ ಅಳ ತೊಡಗಿದಳು. ಉದಯನು ಅವಳ ಕಣ್ಣೀರೊರಸಿ ಸಮಾಧಾನ ಮಾಡಿದನು. ಬೇಡರೊಡನೆ ಮೃದುವಾಗಿ ಮಾತಾಡುತ್ತ ವಸಂತಕನ ಬರವನ್ನು ಎದುರು ನೋಡುತ್ತಿದ್ದನು.

# ೨೨ ಮತ್ತೆ ಸ್ವದೇಶದಲ್ಲಿ

ಇತ್ತ ವಸಂತಕನು ಕಾಡಿನಲ್ಲಿ ದಾರಿ ಮಾಡಿಕೊಂಡು ದಿಕ್ಕು ನೋಡಿ ದಾರಿ ನಡೆಯುತ್ತಾ ಬಹು ವೇಗವಾಗಿ ಹೋಗಿ ಪುಷ್ಪಕನಗರವನ್ನು ಸೇರಿದನು. ವೃಷಭಕನು ಉದಯನನ ವಿಷಯದಲ್ಲಿ ಕೆಟ್ಟ ಸುದ್ದಿ ಕೇಳಿ ಕಳವಳ ಗೊಂಡಿದ್ದನು : ಪ್ರದ್ಯೋತನನ ನಂಟರು ಒಳಗೆ ಆಯುಧ ಹರಡಿದ ಹುಸಿ ನೆಲದ ಮೇಲೆ ಉದಯನನ್ನು ವಂಚನೆಯಿಂದ ಬೀಳಿಸಿ ಕೊಂದರೆಂದು ಸುದ್ದಿ ಬಂದಿತ್ತು. ನಿಜವನ್ನರಿತು ಬರಲು ಉಜ್ಜಯಿನಿಗೆ ದೂತನನ್ನು ಕಳಿಸುವುದರಲ್ಲಿದ್ದನು. ಅಷ್ಟರಲ್ಲಿ ಎದುರಿಗೆ ಬಂದ ವಸಂತಕನನ್ನು ಕಂಡು ಸಂತೋಷ ಹೊಂದಿದನು.

ವಸಂತಕನು ಉಜ್ಜಯಿನಿಯಲ್ಲಿ ನಡೆದದ್ದನ್ನೆಲ್ಲ ಸಂಕ್ಷೇಪವಾಗಿ ಹೇಳಿ ಉದಯನನು ವಾಸವದತ್ತೆಯನ್ನು ಕರೆದುಕೊಂಡು ಬರುತ್ತ ದಾರಿಯಲ್ಲಿ ಕಾಡಿನ ನಡುವೆ ಸಿಕ್ಕಿಬಿದ್ದಿರುವುದನ್ನು ತಿಳಿಸಿದನು. ಒಡನೆಯೇ ಸೈನ್ಯ ತೆಗೆದುಕೊಂಡು ಹೋಗದಿದ್ದರೆ ತಮ್ಮರಸನಿಗೆ ಅಪಾಯ ಒದಗಿದರೂ ಒದಗ ಬಹುದೆಂದನು. ಉದಯನನು ತಿಳಿಸಿದ್ದ ಸಂಕೇತ ಸಂಗತಿಗಳನ್ನು ಹೇಳಿ ನಂಬಿಕೆಯನ್ನು ದೃಢಪಡಿಸಿದನು.

ಕೂಡಲೆ ಸೇನೆ ಸಿದ್ಧವಾಯಿತು. ವಾಸವದತ್ತೆಗೆ ಬೇಕಾಗುವ ಬಗೆ ಬಗೆಯ ವಸ್ತುಗಳನ್ನು ತೆಗೆದುಕೊಂಡು ಅನೇಕ ಜನ ದಾಸದಾಸಿಯರೂ ಹೊರಟರು. ಪಲ್ಲಕ್ಕಿ ತೇರು ಮೊದಲಾದ ವಾಹನಗಳನ್ನು ಸೇರಿಸಿಕೊಂಡರು.

ಸಮಸ್ತ ಸಾಧನಗಳನ್ನೂ ತೆಗೆದುಕೊಂಡು ವಸಂತಕನನ್ನು ಹಿಂಬಾಲಿಸಿ ವೃಷಭಕನು ವಿಂಧ್ಯದಡವಿಗೆ ಬಂದನು.

ಅತಿ ಆತುರದಿಂದ ದಾರಿನಡೆದು ಎಲ್ಲರೂ ಅಡವಿಯನ್ನು ಒಳಹೊಕ್ಕರು. ಬರಬರುತ್ತ ದೂರದಲ್ಲಿ ಹೊಗೆಯ ತೆರೆಯನ್ನೂ ಅದರಿಂದೀಚೆಗೆ ಅಲ್ಲಲ್ಲಿ ಗುಂಪು ಗುಂಪಾಗಿ ಹಾರಾಡುವ ಹದ್ದು ಕಾಗೆಗಳನ್ನೂ ಕಂಡರು ; ಕಂಡು ಕಳವಳಿಸುತ್ತಾ ಮುನ್ನಡೆದರು. ನೆರವಿಗೆ ತಾವು ಬರುತ್ತಿರುವುದನ್ನು ಸೂಚಿಸುವುದಕ್ಕಾಗಿ ಕೊಂಬು ತುತ್ತೂರಿಗಳನ್ನು ಊದಿ ಮೊಳಗಿಸಿದರು.

ಈ ಆಕಸ್ಮಿಕಕ್ಕೆ ಬೇಡರಿಗೆ ದಿಕ್ಕು ತೋಚದಂತಾಯಿತು. ಸ್ವಲ್ಪ ಹೊತ್ತು ದಂಡಾಳುಗಳೊಡನೆ ಹೋರುತ್ತಿದ್ದು ಸೋತು ಚೆದರಿ ಹೋದರು. ಬಳಿಕ ವಸಂತಕನೂ ವೃಷಭಕನೂ ಉದಯನನ ಬಳಿ ಸಾರಿದರು. ಬಹು ಕಾಲ ಕಣ್ಮರೆಯಾಗಿ, ಹಗೆಯ ಸೆರೆಯಲ್ಲಿ ಸಿಕ್ಕಿ ಈಗ ಆ ವ್ಯಥೆಯನ್ನು ನೀಗಿ ಹೊರ ಬಂದ ತಮ್ಮರಸನು ಸುರಕ್ಷಿತವಾಗಿ ಬಂದು ತಮ್ಮನ್ನು ಸೇರಿದ್ದಲ್ಲದೆ ಸಿರಿದೇವಿಯಂತೆ ಬೆಳಗುವ ಸ್ತ್ರೀ ರತ್ನವನ್ನೂ ಸಂಪಾದಿಸಿಕೊಂಡು ಬಂದದ್ದನ್ನು ಕಂಡು ವೃಷಭಕನು ಹಿಡಿಸಲಾರದಷ್ಟು ಆನಂದ ಹೊಂದಿದನು.

ಬಹು ಬೇಗ ಸುತ್ತಮುತ್ತ ಸಣ್ಣ ದೊಡ್ಡ ಗುಡಿಸಿಲುಗಳೆದ್ದವು. ಉದಯನ ವಾಸವದತ್ತೆಯರಿಗೆ ತಕ್ಕ ಪಟಮಾಡಗಳು ಸಿದ್ಧವಾದವು. ದೂರ ಪ್ರಯಾಣದಿಂದಲೂ ಊಟನಿದ್ದೆಗಳಿಲ್ಲದೆ ಕಾಡುಕಿರಾತರೊಡನೆ ಹೋರಾಡಿದ್ದರಿಂದಲೂ ದಣಿದು ಸೋತಿದ್ದ ಉದಯನನಿಗೂ, ಅವನಂತೆಯೇ ಬಳಲಿ ಮನಸದ ಕಳವಳದಿಂದ ಹಣ್ಣಾಗಿದ್ದ ವಾಸವದತ್ತೆಗೂ ಬಗೆ ಬಗೆಯಾಗಿ ಉಪಚಾರಮಾಡಿದರು. ಕಮ್ಮೆಣ್ಣೆಯನ್ನು ಪೂಸಿ ನರುನೀರಿನಲ್ಲಿ ಮಾಯಿಸಿ, ವೈದ್ಯರು ಹೇಳಿ ಮಾಡಿಸಿದ ರುಚಿಕರವಾದ ಅಡಿಗೆಗಳನ್ನು ಉಣಬಡಿಸಿದರು.

ಅಲ್ಲಿ ತಂಗಿ ದಣಿವಾರಿಸಿಕೊಂಡ ಬಳಿಕ, ಜಯಂತೀ ನಗರಕ್ಕೆ ಹೊರಡಲು ಸಿದ್ಧತೆ ನಡೆಯಿತು. ಅಲಂಕರಿಸಿದ ಆನೆಯ ಮೇಲೇರಿ ಉದಯನನು ಮೇಘದ ಮೇಲೇರಿದ ಸೂರ್ಯನಂತೆ ಕಂಗೊಳಿಸಿದನು. ಪೂರ್ಣಚಂದ್ರನಂತೆ ಬೆಳ್ಗೊಡೆ ಬೆಳಗಿತು. ಕಾಂಚನಮಾಲೆಯ ತೋಳನ್ನು ನೆಮ್ಮಿ ವಾಸವದತ್ತೆ ಇಂದ್ರನ ಸಿರಿಗುವರಿಯಂತೆ ಚಿತ್ರಗೆಲಸದಿಂದ ಕೂಡಿ ಕಳೆಯೆರಚುವ ಮಣಿ

ತೇರಿನ ಮೇಲೆ ಹತ್ತಿದಳು. ವೀರಭಟರು ವೈಗಾವಲಿಗೆ ಅಣಿಯಾಗಿ ನಿಂತರು. ಬಾವುಟಗಳು ಅಳ್ಳಾಡಿದವು. ಬೆಟ್ಟಗಳಲ್ಲಿ ಎದುರುಲಿ ಹೊರಹೊರಡುವಂತೆ ಮುರಜಗಳು ಮೊಳಗಿದವು.

ಹೀಗೆ ರಾಜವೈಭವದಿಂದ ಮೆರೆಯುತ್ತ ಉದಯನನು ವಾಸವದತ್ತೆ ಯೊಡನೆ ಮತ್ತೆ ಸ್ವದೇಶವನ್ನು ಪ್ರವೇಶಿಸಿದನು.

## ೨೩ ಮದುವೆ

ತಮ್ಮರಸನು ಹಗೆಯ ಹಿಡಿತದಿಂದ ಬಿಡಿಸಿಕೊಂಡು ಸ್ವದೇಶಕ್ಕೆ ಮರಳಿದ ಸುದ್ದಿಯನ್ನು ಕೇಳಿ ನಾಡಿಗರೆಲ್ಲ ನಲಿದರು. ಅವನು ತಪ್ಪಿಸಿಕೊಂಡು ಬಂದದ್ದು ಮಾತ್ರವಲ್ಲ, ಚಕ್ರವರ್ತಿಯ ಮಗಳನ್ನೂ ಹರಣ ಮಾಡಿಕೊಂಡು ಬಂದ ನೆಂದು ತಿಳಿದ ಮೇಲಂತೂ ಅವರ ಆನಂದಕ್ಕೆ ಪಾರವಿಲ್ಲವಾಯಿತು. ಬಗೆ ಬಗೆಯಲ್ಲಿ ಹಾಡಿ ಹೊಗಳತೊಡಗಿದರು.

ಗುಡ್ಡಗಾಡಿನ ಬೇಡರು ಆನೆಯ ದಂತ, ಮಲೆಯ ಜೇನು, ಅಗಿಲು, ಬಿದಿರ ಮುತ್ತು ಮುಂತಾದುವನ್ನು ಕಾಣಿಕೆ ಕೊಟ್ಟು ಪಡೆಯೊಡನೆ ಕೂಡಿ ತಾವೂ ಕಾವಲು ಕಾಯುತ್ತ ಬಂದರು. ದಾರಿ ಪಕ್ಕದ ಊರುಗಳ ಜನ ಗುಂಪು ಗುಂಪಾಗಿ ಬಂದು ನೋಡಿ ಆನಂದಿಸಿದರು. ಹೀಗೆ ಹಲವು ಹಳ್ಳಿ ಗಳನ್ನೂ ಅಲ್ಲಲ್ಲಿ ಸಜ್ಜಾಗಿಟ್ಟದ್ದ ಕಿರುಗೋಟೆಗಳನ್ನೂ ದಾಟಿ ಕೆಲವು ಮಜಲು ಗಳಲ್ಲಿ ಜಯಂತೀ ನಗರವನ್ನು ಸೇರಿದರು.

ಆ ನಗರದವರು ಉದಯನನ ಬರವನ್ನು ಕೇಳಿ ಬೀದಿ ಬೀದಿಗಳಲ್ಲಿ ಚಪ್ಪರ ಕಟ್ಟಿ ಕೆಳಗೆ ಹೂ ಹರವಿದರು. ಮನೆ ಮನೆಯ ಬಾಗಿಲಿನಲ್ಲೂ ತೋರಣ ಕಟ್ಟಿ ಕಂಬಗಳ ಮೇಲೆ ಸಣ್ಣ ;ದೊಡ್ಡ ಬಾವುಟಗಳನ್ನು ಹಾರಿಸಿ ದರು. ಹಲಬಗೆಯ ವಾದ್ಯಗಳನ್ನು ಬಾಜಿಸುತ್ತಾ ಹೋಗಿ ಉದಯನನ ವಾಸವದತ್ತೆಯರನ್ನು ಎದುರುಗೊಂಡು ಕರೆತಂದರು.

ಹೆಂಗಸರೂ ಮಕ್ಕಳೂ ಬಾಗಿಲಿಗೆ ಬಂದು ನಿಂತುನೋಡಿ ಕಣ್ ತಣಿದು ಹಿಗ್ಗಿದರು. ಹಿರಿಯರೂ ಕಿರಿಯರೂ ಎಲ್ಲ ನೆರೆದು ನೋಡಿ ನೋಡಿ ನಲಿದು,

"ನಮ್ಮ ದೊರೆ ನೂರು ಕಾಲ ಬಾಳಲಿ" ಎಂದು ಹರಸುತ್ತಿದ್ದರು. "ನಮ್ಮ ಕಷ್ಟದ ಕತ್ತಲೆಯನ್ನು ಕರಗಿಸುವ ಸೂರ್ಯನೇ, ಬಾ" ಎಂದೂ, "ನೀನಿಲ್ಲದಾಗ ಕೌಶಾಂಬಿಯನ್ನು ವಶಪಡಿಸಿಕೊಂಡು ಕೆಟ್ಟಾಳಿಕೆ ನಡೆಸುತ್ತಿರುವ ಆರುಣಿಯನ್ನು ಗೆದ್ದು ನಮ್ಮನ್ನು ಧರ್ಮದಿಂದ ಪಾಲಿಸಬಂದ ಧರ್ಮದರಸೇ ಬಾ" ಎಂದೂ, "ಶ್ರೀ ಮಹಾ ವಿಷ್ಣುವಿನ ಎದೆಯನ್ನು ಸಾರಿ ಸುಖಹೊಂದಿದ ಸಿರಿದೇವಿಯಂತೆ ನಮ್ಮರಸನನ್ನು ಸೇರಿ ಸುಖಹೊಂದಿದ ಪುಣ್ಯವತಿಯೇ ಬಾ" ಎಂದೂ ಅವರನ್ನು ನಾನಾ ವಿಧವಾಗಿ ಸ್ವಾಗತಿಸಿದರು.

"ಪ್ರದ್ಯೋತನ ಚಕ್ರವರ್ತಿಯ ಸಿರಿಮಗಳು ವಾಸವದತ್ತೆ ತಾನಾಗಿ ನಮ್ಮರಸನೊಡನೆ ಒಲಿದು ಬಂದದ್ದನ್ನು ಕಂಡ ನಾವೇ ಪುಣ್ಯವಂತರು!" ಎಂದು ಕೆಲವರು ಹೆಮ್ಮೆಯಿಂದ ಹೇಳಿಕೊಂಡರು.

"ಚಕ್ರವರ್ತಿಯ ಮಗಳು ವಾಸವದತ್ತೆ ಕಡು ಚೆಲುವೆಯೆಂದೂ ಕಾಣಲರಿದಾದವಳೆಂದೂ ಕೇಳಿದ್ದೆವು. ನಮ್ಮ ದೊರೆ ಅವಳನ್ನು ಇಲ್ಲಿ ಕರೆತಂದು ನಮಗೆ ತೋರಿಸಿದನು. ಕಣ್ಣುಪಡೆದದ್ದು ಸಾರ್ಥಕವಾಯಿತು" ಎಂದು ಕೆಲವರು ತೃಪ್ತಿಪಟ್ಟುಕೊಂಡರು.

ದೂರಾಲೋಚನೆಯ ವಿಮರ್ಶಕರು ಕೆಲವರು, "ವೀಣೆಯಲ್ಲಿ ಪರಿಣತಿ ಹೊಂದಿ ಕುಲಶೀಲಗಳ ಮೇಲ್ಮೆಯಿಂದ ಎಣೆಯಿಲ್ಲದವನಾಗಿ ಬೆಳಗುವ ಉದಯನನಿಗೆ ವಾಸವದತ್ತೆಯನ್ನು ಮದುವೆ ಮಾಡಿಕೊಡಬೇಕೆಂದು ಚಕ್ರವರ್ತಿಯ ಆಸೆ. ಹಾಗೆ ಕೇಳಿದರೆ ವಿರೋಧಿಯಾಗಿ ಎದುರುನಿಂತಿರುವ ಇವನು ಒಪ್ಪದೆ ಹೋದಾನೆಂಬ ಭಯ. ಅದರಿಂದ ನಮ್ಮರಸನನ್ನು ಆನೆಯ ನೆವದಿಂದ ವಂಚಿಸಿ ಹಿಡಿತರಿಸಿ, ವಾಸವದತ್ತೆ ಅವನ ಕಣ್ಣಿಗೆ ಬೀಳುವಂತೆ ಮಾಡಿ, ಅವಳಿಗೆ ವೀಣೆಕಲಿಸಲು ಒಪ್ಪಿಸಿದನು. ಈ ಉಪಾಯದಿಂದ ಅವಳ ಚೆಲುವಿನಲ್ಲಿ ಸಿಕ್ಕಿಸಿ ಮಗಳನ್ನು ಇವನೊಡನೆ ಕಳಿಸಿದ್ದಾನೆ, ಚಕ್ರವರ್ತಿ. ಸೋತು ಗೆಲ್ಲುವ ಜಾಣತನ ಅವನದು! ತಕ್ಕ ವರನಿಗೆ ಹೆಣ್ಣು ಕೊಡುವವರ ಪರಿಯೇ ಹೀಗೆ" ಎಂದು ಪ್ರದ್ಯೋತನನ ಅಂತರಂಗವನ್ನು ಊಹಿಸಿ ಮಾತಾಡಿಕೊಳ್ಳುತ್ತಿದ್ದರು.

ಹೀಗೆ ಪ್ರಜೆಗಳ ಆನಂದವನ್ನುಕ್ಕಿಸುತ್ತ ನಗರಪ್ರವೇಶಮಾಡಿ ಉದಯಗ ಕುಮಾರನು ಅರಮನೆಯಲ್ಲಿ ತಂಗಿದನು. ವಿಶ್ರಾಂತಿಯಲ್ಲಿಯೂ ಸಂತೋ

ಷೋತ್ಸವಗಳಲ್ಲಿಯೂ ಕೆಲವು ದಿನ ಕಳೆಯಿತು. ಆಗ ಹಿತವರೂ ಹಿರಿಯರೂ ಕೂಡಿ ಆಲೋಚಿಸಿ ಉದಯನ ವಾಸವದತ್ತೆಯರಿಗೆ ವಿವಾಹ ಮಂಗಳವನ್ನು ನೆರವೇರಿಸಬೇಕೆಂದು ನಿಶ್ಚಯಿಸಿದರು.

ತನ್ನ ವಿದ್ಯಾಮಹಿಮೆಯಿಂದ ಅನೇಕ ರಾಜಮರ್ಯಾದೆಗಳನ್ನುಪಡೆದಿದ್ದ ಶ್ರೇಷ್ಠ ಗಣಕನೊಬ್ಬನು ಮದುವೆಗೆ ತಕ್ಕ ಮಂಗಳ ಮುಹೂರ್ತವನ್ನು ಗೊತ್ತುಮಾಡಿದನು. ಅರಸನ ವಿಜಯಭೇರಿಯನ್ನು ಹೂವು ಗಂಧಗಳಿಂದಲೂ ಮುತ್ತು ಮಾಲೆಗಳಿಂದಲೂ ಅಲಂಕರಿಸಿ ಆನೆಯ ಮೇಲಿಟ್ಟು ಹೊಂಗೋಲಿನಿಂದ ಬಡಿಯುತ್ತ ಮದುವೆ ಮಂಗಳದ ಸಂಗತಿಯನ್ನು ನಗರದಲ್ಲೆಲ್ಲಾ ಸಾರಿಸಿದರು.

ನಗರದವರ ಸಂತೋಷ ಇಮ್ಮಡಿಸಿತು. ಮನೆ ಬಾಗಿಲುಗಳಿಗೆ ತೋರಣ ಕಟ್ಟಿ ಬಾವುಟ ಏರಿಸಿ ಬಗೆ ಬಗೆಯ ಅಲಂಕಾರ ಮಾಡಿದರು. ಎಲ್ಲೆಲ್ಲೂ ಚಪ್ಪರಗಳೆದ್ದವು. ಜಿನಾಲಯಗಳಲ್ಲಿ ಪೂಜೋತ್ಸವಗಳೂ ಪುರಾಣ ಶ್ರವಣಗಳೂ ಎಡೆಬಿಡದೆ ನಡೆಯತೊಡಗಿದವು. ಅಮೃತದಂಥ ಅಡಿಗೆಗಳನ್ನು ತೃಪ್ತಿಯಾಗುವಂತೆ ಉಣಬಡಿಸುವ ಅನ್ನಸತ್ರಗಳು ಎಲ್ಲೆಲ್ಲೂ ಕಂಗೊಳಿಸುತ್ತಿದ್ದವು. ಅರಸನ ಅಪ್ಪಣೆಯಂತೆ,ನಗರದ ವರ್ತಕರೆಲ್ಲ ಯಾರೇನು ಕೇಳಿದರೂ ಕೈ ಹಿಡಿಯದೆ ಕೊಟ್ಟುಬಿಡುತ್ತಿದ್ದರು; ಒಂದಕ್ಕೆರಡಾಗಿ ಆ ಮೇಲೆ ಅರಸನಿಂದ ತಮಗೆ ಮೆಚ್ಚು ದೊರೆಯುವುದೆಂದು ಅವರಿಗೆ ಚೆನ್ನಾಗಿ ಗೊತ್ತು. ಉಟ್ಟು ತೊಟ್ಟು ಉಂಡು ತಣಿದು ತಮ್ಮತಂಟೆತಾಯಿಗಳೊಡನೆ ಕಲ್ಯಾಣಮಂಟಪಕ್ಕೆ ಹೋಗಲು ಮನೆ ಮನೆಯ ಮಕ್ಕಳೆಲ್ಲ ಸಡಗರಿಸುತ್ತಿನ್ದರು.

ಕಲ್ಯಾಣಮಂಟಪದ ಸೊಬಗಿಗೆ ಎಣೆಯಿಲ್ಲ! "ನಿಪುಣರಾದ ಕಲೆಗಾರರು ಓಲೆಗರಿ, ಬೆಂಡು, ಬಟ್ಟೆ ಮೊದಲಾದವುಗಳಿಂದ ಕಂಪು ಕಾಣ್ಕೆಗಳಲ್ಲಿ ಸ್ವಲ್ಪವೂ ಬೇರ್ಪಾಟಿಲ್ಲದಂತೆ ಎಲೆ, ಚಿಗುರು, ಮುಗುಳು, ಅರಳು ಮೊಗ್ಗು, ಮಲರು–ಇವುಗಳುಳ್ಳ" ಹಲವು ಬಗೆಯ ಮರಗಳನ್ನೂ ಬಳ್ಳಿಗಳನ್ನೂ ಮಾಡಿ ಚಪ್ಪರದ ಕಂಬಗಳಲ್ಲೆಲ್ಲಾ ಕಟ್ಟಿದರು. ಗೋಡೆಗಳಲ್ಲಿ ಚಿತ್ರಗಳನ್ನು ಬರೆದರು. ಕಾಲವನ್ನು ತೋರಿಸುವ ಯಂತ್ರಗಳನ್ನು ತಕ್ಕ ತಕ್ಕ ಕಡೆಗಳಲ್ಲಿ ತಂದಿಟ್ಟರು. "ನೋಡಿದವರ ಕಣ್ಣುಗಳನ್ನು ಮರಳಲು ಬಿಡದಂತೆ" ಇನ್ನೂ ಅನೇಕ ಅಲಂಕಾರಗಳನ್ನು ಮಾಡಿದರು.

ಅರಮನೆಯ ಹೆಂಗಸರು ಹಾಡಿದ ಇನಿದನಿಯನ್ನು ಹೊಮ್ಮಿಸುತ್ತ ಕರೆತಂದ ಕನ್ನೆಯರು ಸಾವಿರದೆಂಟು ಆನೆಗಳ ಮೇಲೆ ಹೋಗಿ 'ವಿವಾಹದ ನೀರು' ತಂದರು. ಮದುಮಕ್ಕಳಿಗೆ ಮಂಗಳಸ್ನಾನವಾಯಿತು. ಜೋಯಿಸರು ಮುಹೂರ್ತ ಕಾಲವನ್ನು ತಿಳಿಸಿದರು. ವೇದಪಾರಂಗತರಾದ ಪುರೋಹಿತರು ಉದಯನನನ್ನೂ ವಾಸವದತ್ತೆಯನ್ನೂ ಮದುವೆ ಮಂಟಪದಲ್ಲಿ ಹಸೆಯ ಮೇಲೆ ಕೂರಿಸಿ, ಎದುರಿನಲ್ಲಿ ಅಗ್ನಿಯನ್ನು ಬೆಳಗಿಸಿ ವಿಧಿಪ್ರಕಾರವಾಗಿ ಹೋಮಗಳನ್ನೂ ಇತರ ಕರ್ಮಗಳನ್ನೂ ನೆರವೇರಿಸಿ ಮದುವೆ ಮಾಡಿದರು. ವಾಸವದತ್ತೆಯ ಮುಂಗೈಯನ್ನು ಹಿಡಿದುಕೊಂಡು ಉದಯನನು ಬೆಂಕಿಯನ್ನು ಬಲವಂದನು. ಹಿರಿಯರೆಲ್ಲರೂ,

"ನಲ್ಮೆಲೆಯ ಲೋಕದಲಿ ಜಂಬು ದೀವದ ವೋಲು
ಹೊನ್ನ ನಿಡು ಮಲೆ ವೋಲು ನೆಲೆಯಾಗಿ ನಿಲಲಿವರು"

ಎಂದು ಹರಸಿದರು.

ಮದುವೆ ಕಾಲದಲ್ಲಿ ಒಂದು ದಿನ ಉದಯನ ವಾಸವದತ್ತೆಯರು ಮಂಗಳಸ್ನಾನ ಮಾಡಿ ಅಲಂಕರಿಸಿಕೊಂಡು ದೇವಾಲಯಕ್ಕೆ ಹೋಗಿ ಮುಕ್ಕೊಡೆಗಳ ಕೆಳಗೆ ಬೆಳಗುವ ಅರ್ಹದೇವನನ್ನು ದರ್ಶನ ಮಾಡಿದರು. ಭಕ್ತಿಯಿಂದ ಮಣಿದು ಪ್ರಾರ್ಥಿಸಿದರು. ಆ ಮೇಲೆ ಮಹಾ ವೈಭವದಿಂದ ನಗರವನ್ನು ಬಲವಂದರು. ಆಗ ಉದಯನನ ಹೊಸ ಮದುವೆ ವೇಷವನ್ನೂ ಚೆಲುವಿನ ನೆಲೆಯೆನಿಸಿದ ವಾಸವದತ್ತೆಯನ್ನೂ ಮೆರವಣಿಗೆಯ ಸೊಗಸನ್ನೂ ನೋಡುವುದಕ್ಕೆ ನಗರದ ಜನವೆಲ್ಲ ನೆರೆದರು. ಮನೆ ಮಾಡಗಳ ಮೇಲೂ ಕಟ್ಟುಮಲೆಗಳ ಮೇಲೂ ನಗರ ನೋಟದ ಅಟ್ಟಣೆಗಳ ಮೇಲೂ ಹತ್ತಿ ನೋಡಿ ಹಿಗ್ಗಿದರು.

ಅದಾದ ಮೇಲೆ ಉದಯನ ವಾಸವದತ್ತೆಯರು ಅರಮನೆಯನ್ನು ಸೇರಿ ಒಬ್ಬರನ್ನೊಬ್ಬರು ಬಿಟ್ಟಗಲದೆ ಬಹು ಪ್ರೀತಿಯಿಂದ ಎಣೆಯಿಲ್ಲದ ಆನಂದವನ್ನು ಅನುಭವಿಸುತ್ತ ಬಾಳುತ್ತಿದ್ದರು.

# ೨೪ ಯೂಗಿಯ ಯೋಚನೆ

ಇತ್ತ ಉಜ್ಜಯಿನಿಯಲ್ಲಿ ವಾಸವದತ್ತೆಯನ್ನು ಹರಣ ಮಾಡಿಕೊಂಡು ಹೋಗಲು ಉದಯನನಿಗೆ ಅನುವು ಮಾಡಿಕೊಟ್ಟು, ಅವನನ್ನು ಬೆಂಬತ್ತಿ ಹಿಡಿಯ ಹೊರಟ ಪಡೆವೀರರನ್ನು ತಡೆದು ಹೋರಿ ಹಿಮ್ಮೆರಳುವಂತೆ ಮಾಡಿದ ಯೂಗಿಯು ಮಹಾಕಾಳವನದಲ್ಲಿದ್ದ ತನ್ನ ಸಂಕೇತ ಸ್ಥಾನಕ್ಕೆ ಹೋಗಿ ಸೇರಿದನು. ನೀರಹಬ್ಬದ ಪವಿತ್ರ ಸಮಯದಲ್ಲಿ ತಮ್ಮ ನಗರಕ್ಕೆ ಬೆಂಕಿ ಬಿದ್ದಿದ್ದರಿಂದಲೂ, ತಮ್ಮ ಮೆಚ್ಚಿನ ರಾಜಕುಮಾರಿಯನ್ನು ವತ್ಸರಾಜನು ಹರಣ ಮಾಡಿಕೊಂಡು ಹೋದದ್ದರಿಂದಲೂ ನಗರದವರ ಮನ ಕಲಕಿತು. ಉದಯನನನ್ನು ತಡೆದು ನಿಲ್ಲಿಸಲು ತಮ್ಮಿಂದಾಗಲಿಲ್ಲವಲ್ಲಾ ಎಂದು ಪ್ರದ್ಯೋತನನ ಸೇನೆಯ ವೀರರು ನೊಂದುಕೊಂಡರು. ಉದಯನನ ವಿಷಯದಲ್ಲಿ ಆ ಯಾರೂ ಮನಸ್ಸು ಕೆಡಿಸಿಕೊಳ್ಳದಂತೆ ಯೂಗಿ ತನ್ನಿಂದಾದಷ್ಟು ಪ್ರಯತ್ನ ಮಾಡಿದನು. "ಉದಯನನ ಗುಣಗಳನ್ನು ಮೆಚ್ಚಿದ ಪ್ರದ್ಯೋತನನು ಸೆರೆ ಸಿಕ್ಕಿ ನೊಂದ ಅವನನ್ನು ತೃಪ್ತಿಪಡಿಸಿ ತನ್ನ ಮಗಳನ್ನು ತಾನಾಗಿಯೇ ಅವನಿಗೆ ಒಪ್ಪಿಸಿಕೊಟ್ಟನು. ಚಕ್ರವರ್ತಿಯ ಅನುಮತಿಯಿಂದಲೇ ಉದಯನನು ವಾಸವದತ್ತೆಯನ್ನು ತನ್ನೊಡನೆ ಕರೆದುಕೊಂಡು ಹೋದನು" ಎಂದು ಎಲ್ಲೆಲ್ಲಿಯೂ ಸುದ್ದಿ ಹಬ್ಬಿಸಿದನು.

ಬಳಿಕ ತನ್ನ ಪರಿವಾರದವರನ್ನೆಲ್ಲ ಕಂಡು, "ನಾನು ಇಲ್ಲಿ ಬಂದ ಕಾರ್ಯ ನೆರವೇರಿತು. ಇನ್ನು ನೀವೆಲ್ಲ ನಮ್ಮ ನಾಡಿಗೆ ಹಿಂದಿರುಗಿ ಹೋಗಿ ನಮ್ಮ ದೊರೆಯನ್ನು ಸೇರಿಕೊಳ್ಳಿರಿ. ಹೋಗುವಾಗ ಒಟ್ಟೊಟ್ಟಾಗಿ ಹೋಗಬೇಡಿ. ಬೇರೆ ಬೇರೆ ದಾರಿಗಳಲ್ಲಿ ತನಿ ತನಿಯಾಗಿ ಹೋಗಿ" ಎಂದು ತಿಳಿಸಿದನು. ಅದರಂತೆಯೇ ಅವರು ಕ್ರಮಕ್ರಮವಾಗಿ ಅಲ್ಲಿನ ಉದ್ಯೋಗಗಳಿಂದ ಬಿಡಿಸಿಕೊಂಡು ಯಾರಿಗೂ ಸಂಶಯಕ್ಕೆ ಎಡೆಗೊಡದಂತೆ ಪ್ರಯಾಣ ಮಾಡಿದರು. ಅವರೆಲ್ಲ ಹೊರಟು ಹೋದ ಮೇಲೆ ಯೂಗಿ ತಾನೂ ಸ್ವದೇಶಕ್ಕೆ ಮರಳಲು ಸಿದ್ಧನಾದನು.

ಆ ಮೊದಲೇ ಉದಯನನ ಸೂಚನೆಯಂತೆ ತನ್ನನ್ನು ಬಂದು ಕಂಡ ಶಾಂಕಿಯ ತಾಯಿಯನ್ನು ತನ್ನ ಸಹಾಯಕನಾದ ಒಬ್ಬ ಕುಂಬಾರನ ಮನೆ

ಯಲ್ಲಿ ರಹಸ್ಯವಾಗಿಟ್ಟಿದ್ದನು. ಅಲ್ಲಿ ಹೋಗಿ ತಾನು ಹೊರಡಲಿರುವುದನ್ನು ಆಕೆಗೆ ತಿಳಿಸಿದನು. ತನ್ನ ಮುಂದಿನ ಕಾರ್ಯ ರೀತಿಯನ್ನು ಆಕೆಗೆ ವಿವರಿಸಿ ತನಗೆ ನೆರವು ನೀಡಬೇಕೆಂದು ಕೇಳಿಕೊಂಡನು. ಹಸಿವು ಬಾಯಾರಿಕೆಗಳನ್ನು ಹೋಗಲಾಡಿಸುವ ಔಷಧಿ ಬೆರೆಸಿದ ಅವಲಕ್ಕಿಯ ಗಂಟನ್ನೂ ತಣ್ಣೀರ ಗಡಿಗೆಯನ್ನೂ ತೆಗೆದುಕೊಂಡು, ಹೊರಡುವುದಕ್ಕೆ ಸಿದ್ಧವಾಗಿರಬೇಕೆಂದು ಹೇಳಿದನು.

ಬಳಿಕ ಉದಯನನಿಗೆ ಬೇಕಾದವನಾದ ಯವನ ಬೀಡಿನ ನಾಯಕನೊಬ್ಬನಿಂದ, ಎತ್ತುಗಳಿಲ್ಲದೆ ಯಂತ್ರದಿಂದ ಮುಂದೆ ಸಾಗುವ ಬಂಡಿಯೊಂದನ್ನು ಮಾಡಿಸಿಕೊಂಡನು. ತನಗೆ ಬೇಕಾಗುವ ಸಾಮಗ್ರಿಯನ್ನೆಲ್ಲ ಆ ಬಂಡಿಯಲ್ಲಿಟ್ಟುಕೊಂಡು, ಶಾಂಕಿಯ ತಾಯಿಯನ್ನೂ ಅದರ ಮೇಲೇರಿಸಿಕೊಂಡು ಉಜ್ಜಯಿನೀ ನಗರವನ್ನು ಬಿಟ್ಟು ಹೊರಟನು. ಬೇರೆಯವರರಿಯದಂತೆ ಗುಟ್ಟಾದ ಕಡೆಗಳಲ್ಲಿ ತಂಗುತ್ತ ಅವಂತೀನಾಡಿನ ಗಡಿಯ ಸಮೀಪಕ್ಕೆ ಹೋಗಿ ಬಂಡಿಯನ್ನು ನಿಲ್ಲಿಸಿದನು. ಶಾಂಕಿಯ ತಾಯಿಯನ್ನು ಇಳಿಸಿ ರಕ್ಷಣೆಯುಳ್ಳ ಒಂದು ಕಡೆ ಬಿಟ್ಟು ಹಿಂದಿನಿಂದ ಬರುವಂತೆ ತಿಳಿಸಿ ತಾನೊಬ್ಬನೆ ರಾತ್ರಿ ಹೊತ್ತು ಪುಷ್ಪಕ ನಗರವನ್ನು ಹೋಗಿ ಸೇರಿದನು. ಅಲ್ಲಿ ಬಂದಿಯನ್ನು ಕಳಚಿ ಒಂದು ಕಡೆ ಇಟ್ಟು ವೃಷಭಕನನ್ನು ಕಾಣ ಹೊರಟನು.

ಗೆಳೆಯರಿಬ್ಬರೂ ಬಹು ಕಾಲದ ಮೇಲೆ ಒಬ್ಬರನ್ನೊಬ್ಬರು ಕಂಡು ಸಂತೋಷಗೊಂಡರು. ಯೂಗಿ ಮೊದಲು ದೊರೆಯ ಯೋಗಕ್ಷೇಮವನ್ನು ಕೇಳಿ ತಿಳಿದು ಆ ರಾತ್ರಿ ವಿಶ್ರಾಂತಿ ಹೊಂದಿ ದಣಿವಾರಿಸಿಕೊಂಡನು. ಮರುದಿನ ಬೆಳಿಗ್ಗೆ ಮಂತ್ರಿಗಳಿಬ್ಬರೂ ಆಲೋಚನೆಗೆ ಸೇರಿದರು. ಅಲ್ಲಿಯವರೆಗೂ ನಡೆದ ಸಂಗತಿಗಳನ್ನು ಒಬ್ಬರಿಗೊಬ್ಬರು ಹೇಳಿದರು. ಆನೆಯ ಮೋಸದಿಂದ ಸೆರೆಸಿಕ್ಕಿದ ಉದಯನನ್ನು ಆನೆಯ ಮೋಸದಿಂದಲೇ ಬಿಡಿಸಿ, ರಾಜಪುತ್ರಿಯೊಡನೆ ಸ್ವದೇಶಕ್ಕೆ ಮರಳಿ ಕಳಿಸಿದ ವಿವರವನ್ನೆಲ್ಲಾ ಯೂಗಿ ಹೇಳಿದನು. ವೃಷಭಕನು, "ಕಷ್ಟಕಾಲದಲ್ಲಿ ಇವರು ಕೈಬಿಟ್ಟರು—ಎನ್ನಿಸದೆ ಗೆಳೆಯರೆಂಬ ಮಾತು ನೆಲೆ ನಿಲ್ಲುವಂತೆ ನಡೆದುಕೊಂಡೆ" ಎಂದು ಅವನನ್ನು ಕೊಂಡಾಡಿದನು.

ಆ ಮೇಲೆ ವೃಷಭಕನು ವರದಿ ಒಪ್ಪಿಸಿದನು ; ಭದ್ರಾವತಿ ಗಡಿನಾಡಿನ ಕಾಡಿನಲ್ಲಿ ಬಿದ್ದು ಮಡಿದದ್ದು, ಬೇಡರು ಬಂದು ಮುತ್ತಿದ್ದು, ವಸಂತಕ

ನಿಂದ ಸುದ್ದಿ ತಿಳಿದು ದಂಡು ತೆಗೆದುಕೊಂಡು ತಾನು ಸಹಾಯಕ್ಕೆ ಹೋದದ್ದು, ಉದಯನ ವಾಸವದತ್ತೆಯರನ್ನು ಉಪಚರಿಸಿ ಜಯಂತೀ ನಗರಕ್ಕೆ ಕರೆದುಕೊಂಡು ಹೋದದ್ದು, ಅಲ್ಲಿ ಅವರಿಗೆ ವೈಭವದಿಂದ ಮದುವೆ ಮಾಡಿದ್ದು—ಎಲ್ಲವನ್ನೂ ವಿವರವಾಗಿ ತಿಳಿಸಿದನು. ಕಡೆಗೆ ತಮ್ಮ ದೊರೆ ಹಗೆಯ ಹಿಡಿತದಿಂದ ತಪ್ಪಿಸಿಕೊಂಡು ಸ್ವದೇಶದಲ್ಲಿ ಸ್ವತಂತ್ರನಾಗಿ ನೆಲಸಿದನೆಂದು ಯೂಗಿ ಹಿಗ್ಗಿದನು.

ವೃಷಭಕ ಮುಂದುವರಿಸಿದನು : "ಉದಯನನು ವಾಸವದತ್ತೆಯೊಡನೆ ಸುಖವಾಗಿ ಬಾಳುತ್ತಿದ್ದಾನೆ. ಸೂರ್ಯಚಂದ್ರರು ಉದಿಸುವುದೂ ಅಸ್ತಮಿಸುವುದೂ ಅವನಿಗೆ ತಿಳಿಯದು. ತನ್ನ ರಾಜಧಾನಿಯಾದ ಕೌಶಾಂಬಿಯನ್ನು ಆರುಣಿ ವಶಪಡಿಸಿಕೊಂಡಿರುವುದನ್ನೂ ಅರಿತಿಲ್ಲ. ತನ್ನ ತಮ್ಮಂದಿರ ಯೋಚನೆಯೂ ಇಲ್ಲ. ಸಂಸಾರ ಸುಖವೊಂದನ್ನೇ ನೆನೆದು ಅದನ್ನೇ ಮೆಚ್ಚಿ, ರಾಜ್ಯ ಕಾರ್ಯಕ್ಕೆ ಸಮಯವನ್ನೇ ಕೊಡುತ್ತಿಲ್ಲ! ನಾನೇನು ಮಾಡುವುದು!" ಎಂದು ವ್ಯಥೆಪಟ್ಟನು.

ಯೂಗಿ ನಸು ನಕ್ಕು, ಗೆಳೆಯನೇ ! ಇದುವರೆಗೂ ನಮ್ಮರಸ ದುಃಖದಲ್ಲಿ ಮುಳುಗಿದ್ದನು. ಈಗ ಸುಖದಲ್ಲಿ ಮೈ ಮರೆಯುವುದು ಸ್ವಾಭಾವಿಕವೇ ಸರಿ !" ಎಂದು ಸಮಾಧಾನ ಹೇಳಿದನು. ಮನಸ್ಸಮಾಧಾನಕ್ಕಾಗಿ ಈ ಮಾತು ಹೇಳಿದರೂ ಸಂದರ್ಭ ನೆಮ್ಮದಿ ತರುವಂತಿರಲಿಲ್ಲ. ಅಷ್ಟು ಹೊತ್ತಿಗೆ ನಗರಕ್ಕೆ ಬಂದಿದ್ದ ಶಾಂಕಿಯ ತಾಯಿಯನ್ನೂ ಆಲೋಚನೆಗೆ ಕರೆಸಿಕೊಂಡನು. ತಾವು ಮೂವರಲ್ಲದೆ ಬೇರೆ ಯಾರೂ ಇಲ್ಲದಂತೆ ಏರ್ಪಡಿಸಿ ಆಕೆಯನ್ನು ಕುರಿತು ಹೀಗೆಂದನು:

"ಉದಯನನನ್ನು ಇನ್ನು ಮುಂದೂ ಕಾಪಾಡುವುದು ನಿಮ್ಮನ್ನು ಕೂಡಿದೆ. ಪ್ರಿಯರಾದವರನ್ನು ಕೇಡಡಸದಂತೆ ಕಾಪಾಡುವಾಗ ವೀರರಂತೆಯೂ, ದೋಷಕ್ಕೆ ಬೀಳದಂತೆ ನಿವಾರಿಸುವಲ್ಲಿ ಗುರುಗಳಂತೆಯೂ, ಒಂದಾಗಿ ಕೂಡಿ ನಡೆಯುವಲ್ಲಿ ಪ್ರಾಣದಂತೆಯೂ, ಮೈಯುಂಡು ಹೋಗಿರುವ ಕೆಟ್ಟ ಚಾಳಿಯನ್ನು ಪರಿಹರಿಸಿ ಸರಿಮಾಡುವಾಗ ಮೈಮನಸ್ಸುಗಳಿಗೆ ಅಹಿತವಾದ ಕೆಲಸಗಳನ್ನೂ ಮಾಡಬೇಕಾಗುವುದರಿಂದ ಹಾಗೆ ತೊಂದರೆಪಡಿ

ಸುವುದಕ್ಕೆ ಹಿಂಜರಿಯದ ಹಗೆಯಂತೆಯೂ ಪ್ರೀತಿಯುಳ್ಳವರು ನಡೆದು ಕೊಳ್ಳಬೇಕು. ಇದು ಅವರ ಕರ್ತವ್ಯ. ನಮ್ಮರಸ ಈಗ ಸುಖಭೋಗದ ಕೆಸರಿನಲ್ಲಿ ಇಳಿದಿದ್ದಾನೆ. ಈ ಕೆಸರಿನಿಂದ ಮೇಲೆತ್ತಿದಲ್ಲದೆ ಅವನು ಅರಸಾಳ್ಕೆಗೆ ತಕ್ಕವನಾಗುವುದಿಲ್ಲ. ಈಗ ನಾವು ಅವನನ್ನು ಮೇಲೆತ್ತಬೇಕು" ಎಂದನು.

ಶಾಂಕಿಯ ತಾಯಿ ಇದನ್ನೆಲ್ಲ ಒಪ್ಪಿದಳು. "ಇದರಲ್ಲಿ ನಾನು ಮಾಡಬೇಕಾದದ್ದೇನಿದೆ ?" ಎಂದು ಕೇಳಿದಳು. "ವಾಸವದತ್ತೆಯಿಂದ ಅಗಲಿಸಿದಲ್ಲದೆ ಅವನು ರಾಜಕಾರ್ಯಕ್ಕೆ ಮನಸ್ಸು ಕೊಡುವುದಿಲ್ಲ. ವಾಸವದತ್ತೆಯನ್ನು ಅವನಿಂದ ಅಗಲಿಸುವುದು ನಿಮ್ಮ ಕೆಲಸ. ಉದಯನನು ವನವಿಹಾರದಲ್ಲಿ ತೊಡಗಿರುವಾಗ ವಾಸವದತ್ತೆಯಿರುವ ಮನೆಗೆ ಬೆಂಕಿ ಹಾಕಿ, ಸುರಂಗ ಮಾರ್ಗದಿಂದ ಅವಳನ್ನು ಕರೆದುಕೊಂಡು ಬರಬೇಕು. ವಾಸವದತ್ತೆ ಸುಟ್ಟು ಹೋದಳೆಂಬ ಸುದ್ದಿ ಹರಡಬೇಕು. ನಾನು ಕೂಡ ಅವಲಕ್ಕಿ ತಿಂದು ಬಿಕ್ಕಳಿಕೆ ಬಂದು ಸತ್ತದ್ದಾಗಿ ದೊರೆಗೆ ತಿಳಿಸಿಬಿಡಿ. ಮುಂದಿನ ಕಾರ್ಯವನ್ನು ಆಗಾಗ ನಿರ್ಧರಿಸಿ ತಿಳಿಸುತ್ತೇನೆ. ನಿಮ್ಮ ಸಹಾಯವಿಲ್ಲದೆ ಈ ಕಾರ್ಯವನ್ನು ಸಾಧಿಸಲಾಗುವುದಿಲ್ಲ." ಎಂದು ತನ್ನ ಹಂಚಿಕೆಯನ್ನು ವಿವರಿಸಿದನು.

ಶಾಂಕಿಯ ತಾಯಿ ಒಪ್ಪಿ ಜಯಂತೀನಗರಕ್ಕೆ ಪ್ರಯಾಣ ಮಾಡಿದಳು.

## ೨೫ ಪತ್ನಿಯ ಪ್ರೇಮ

ಉಜ್ಜಯಿನಿಯಿಂದ ಬಂದ ಯೋಗಿ ಅವಲಕ್ಕಿತಿಂದು ಬಿಕ್ಕಳಿಕೆ ಬಂದು ಸತ್ತನೆಂದು ಸುದ್ದಿ ಹುಟ್ಟಿತು. ವೃಷಭಕ ಮೊದಲಾದವರು ತಮ್ಮ ಜೀವಗೆಳೆಯನು ಸತ್ತಮೇಲೆ ತಾವೂ ಬಾಳಲಾಗದೆಂದು ಗೋಳಾಡಿದರು. "ಇವನು ಶ್ರೇಷ್ಠಜ್ಞಾನಿ. ಇವನ ದೇಹವನ್ನು ಸುಡುವುದು ಸರಿಯಲ್ಲ ; ಗಂಗಾತೀರದಲ್ಲಿ ಹೂಳಬೇಕು" ಎಂದು ಹೇಳಿ ಹೆರರರಿಯದಂತೆ ಮರಸಿಟ್ಟರು. ಯೋಗಿ ಗುಟ್ಟಾಗಿಯೇ ಕಾರ್ಯ ಮಾಡತೊಡಗಿದನು.

ಶಾಂಕಿಯ ತಾಯಿ ಜಯಂತಿಯನ್ನು ತಲುಪಿ ಉದಯನನನ್ನು

ಕಂಡಳು. ತಾಯನ್ನು ಕಂಡ ಕರುವಿನಂತೆ ಅವನು ಆಕೆಯನ್ನು ಪ್ರೀತಿಯಿಂದ ಉಪಚರಿಸಿದನು. ಅವನ ಮಾತನ್ನಾಲಿಸುತ್ತ, ಉಜ್ಜಯಿನಿಯ ಸುದ್ದಿಗಳನ್ನು ತಿಳಿಸಿದಳು. "ಯೂಗಿ ನಿಮ್ಮೊಡನೆ ಬರಲಿಲ್ಲವೆ ?" ಎಂದು ಪ್ರಶ್ನಿಸಲು ಆಕೆ, "ಅಲ್ಲಿ ಮಾಡಬೇಕಾದದ್ದನ್ನೆಲ್ಲಾ ಮಾಡಿ ಯಂತ್ರ ಬಂಡಿಯೊಂದರಲ್ಲಿ ನನ್ನನ್ನು ಕೂರಿಸಿಕೊಂಡು ಹೊರಟನು. ಇತ್ತ ಬಂದು ತಾನು ಕಾಡ ಗಡಿಯಲ್ಲಿ ತಕ್ಕ ಕಾಪಿಟ್ಟು ಬರುವುದಾಗಿ ತಿಳಿಸಿ ನನ್ನನ್ನು ಕಳಿಸಿದನು" ಎಂದಳು.

ಆ ಬಳಿಕ ಆಕೆ ಕರುವನ್ನು ಬಿಟ್ಟಿದ್ದ ಕರೆವಾವಿನಂತೆ ಅತಿ ಕಾತುರತೆಯಿಂದ ವಾಸವದತ್ತೆಯನ್ನು ಹೋಗಿ ಕಂಡಳು. ಚಿಕ್ಕಂದಿನಿಂದ ತನ್ನನ್ನು ಎತ್ತಿ ಆಡಿಸಿದ ಸಾಕು ತಾಯಿಯಾದ್ದರಿಂದ ಅವಳನ್ನು ಕಂಡೊಡನೆ ವಾಸವದತ್ತೆಗೆ ಆನಂದಬಾಷ್ಪ ಉಕ್ಕಿ ಬಂತು. ಕಣ್ಣೀರು ಸುರಿಸುತ್ತಲೇ ಆಕೆಯನ್ನು ತಬ್ಬಿ ತಾಯಿತಂದೆಗಳನ್ನು ನೆನೆದು ಗೋಳಾಡಿದಳು. "ನಿನ್ನ ತಾಯಿಯರೂ ಗೆಳತಿಯರೂ ನಿನ್ನ ಅಗಲಿಕೆಯನ್ನು ತಾಳಲಾರದೆ ಹಲುಬಿ ಸಂಕಟಪಡುತ್ತಿದ್ದಾಗ ನಿಮ್ಮ ತಂದೆ ಬಂದು, 'ದತ್ತೆಯನ್ನು ಉದಯನನೊಡನೆ ಕಳಿಸಿದೆನು' ಎಂದು ಹೇಳಲು ಅವರೆಲ್ಲ ಸಮಾಧಾನಗೊಂಡರು." ಎಂದು ನುಡಿದು ಶಾಂಕಿಯ ತಾಯಿ ಉಜ್ಜಯಿನಿಯ ಸಮಾಚಾರಗಳನ್ನು ತಿಳಿಸಿದಳು ವಾಸವದತ್ತೆ ದುಃಖ ತಣಿಯದೆ ಮತ್ತೆ ಮತ್ತೆ ತಮ್ಮವರನ್ನು ನೆನೆದು ಸಂಕಟಪಡುತ್ತಿದ್ದಳು. ಆಗ ಶಾಂಕಿಯ ತಾಯಿ ಹತ್ತಿರದಲ್ಲಿದ್ದ ಬೆಟ್ಟವೊಂದರ ಮೇಲೆ ವಾಸವದತ್ತೆಯನ್ನು ಕರೆದುಕೊಂಡು ಹೋಗಿ, ಅವಂತಿ ನಾಡಿನ ಕಡೆ ತಿರುಗಿ, "ಮಗಳೇ ! ನೋಡು ಅಲ್ಲಿ ಕಾಣುತ್ತಿರುವುದೇ ನಿಮ್ಮ ತಂದೆಯ ನಗರ. ಚಿಂತಿಸಬೇಡ. ಹುಟ್ಟಿದ ಮನೆಯನ್ನೇ ನೆನೆದು ದುಃಖಪಡುವುದು ಮಂಗಳಮಡದಿಯರ ರೀತಿಯಲ್ಲ" ಎಂದು ಮೃದು ನುಡಿಗಳಿಂದ ಅವಳ ಕಳವಳವನ್ನು ಕಳೆದಳು.

ಕೆಲವು ದಿನ ಕಳೆಯಿತು. ಮತ್ತೊಮ್ಮೆ ಶಾಂಕಿಯ ತಾಯಿ ವಾಸವದತ್ತೆಯನ್ನು ಏಕಾಂತ ಸ್ಥಳದಲ್ಲಿ ಕೂರಿಸಿಕೊಂಡು ಯೂಗಿಯ ಆಲೋಚನೆಯನ್ನು ಅರಿಕೆ ಮಾಡಿದಳು. "ಮಗಳೇ ; ನೀನು ಪುಣ್ಯವಂತೆ. ನಿನ್ನರಸ ನಿನ್ನಲ್ಲಿ ಅಪಾರ ಪ್ರೀತಿಯಿಟ್ಟಿದ್ದಾನೆ. ಆ ಪ್ರೀತಿಯಲ್ಲಿ ಮುಳುಗಿ ಬೇರೆ

ಏನನ್ನೂ ಅರಿಯದವನಾಗಿದ್ದಾನೆ. ತನ್ನ ರಾಜಧಾನಿಯನ್ನೂ ರಾಜ್ಯವನ್ನೂ ಹಗೆ ದೊರೆ ಆಕ್ರಮಿಸಿರುವುದನ್ನೂ ನೆನೆಯಲಾರದವನಾಗಿದ್ದಾನೆ. ಹೀಗಿದ್ದರೆ ಹೇಗೆ ? ಉದಯನನಿಗೆ ಒಳ್ಳೆಯ ಅರಿವುಂಟಾಗುವಂತೆ ಮಾಡುವುದಕ್ಕಾಗಿ ಯೂಗಿ ಆಲೋಚಿಸಿರುವ ಉಪಾಯ ಇದು " ಎಂದು ಆ ಹಂಚಿಕೆಯನ್ನು ವಿವರಿಸಿದಳು. ಮುಂದುವರಿಸಿ, "ಈಗ ಅಗಲಿಕೆಯನ್ನು ಸಹಿಸುವುದು ಕಷ್ಟ; ನಾನು ಬಲ್ಲೆ. ಈಗಿನ ಕಷ್ಟವನ್ನು ಸಹಿಸಿದರೆ ಮುಂದೆ ಸುಖವುಂಟು. ಮೈನೋಯಿಸಿ ವಿದ್ಯೆ ಕಲಿತು ನವೆದು ನೋಂತು ತಪಸ್ಸು ಮಾಡಿದರೆ ಕಡೆಯಲ್ಲಿ ಶ್ರೇಯಸ್ಸು ದೊರೆಯುವುದಲ್ಲಾ, ಹಾಗೆ" ಎಂದು ಹಲವು ರೀತಿಯಲ್ಲಿ ನಿದರ್ಶನ ಕೊಟ್ಟು ಹೇಳಿ ಒಪ್ಪಿಸಿದಳು.

ಸಾಕುತಾಯಿಯ ಮಾತಿನ ಸತ್ಯ ಮನದಟ್ಟಿತು. ಗಂಡನ ಏಳಿಗೆಗಾಗಿ ವಾಸವದತ್ತೆ ಮಹಾತ್ಯಾಗಕ್ಕೆ ಸಿದ್ಧಳಾದಳು.

## ೨೬ ಗೆಳೆಯನಿಗಾಗಿ ಕಳವಳ

ಶಾಂಕಿಯ ತಾಯಿ ಯೂಗಿಯನ್ನು ಕಂಡು ಸಂಗತಿಯನ್ನು ತಿಳಿಸಿದಳು. ಅವನು ಉದಯನನ ಚಿತ್ರವೊಂದನ್ನು ಅವಳಿಗೆ ಕೊಟ್ಟನು. ಅದರಲ್ಲಿ ಉದಯನನಿಗೆ ನಾಲ್ಕು ಕಣ್ಣುಗಳನ್ನು ಚಿತ್ರಿಸಿ, ಮೇಲುಗಡೆಯದನ್ನು ಉಜ್ಜಿ ಮಸುಕು ಮಾಡಿತ್ತು. ಶಾಂಕಿಯ ತಾಯಿ ಅದನ್ನು ತಂದು ಉದಯನನು ವಾಸವದತ್ತೆಯೊಡನೆ ವಿನೋದ ಗೋಷ್ಠಿಯಲ್ಲಿದ್ದಾಗ ಅವನ ಕೈಗೆ ಕೊಟ್ಟಳು.

ಆ ಚಿತ್ರದ ನಯಗೆಲಸವನ್ನು ಮೆಚ್ಚಿ ನೋಡುತ್ತಿದ್ದಾಗ ಮೇಲುಗಡೆಯ ಕಣ್ಣು ಉಜ್ಜಿಹೋಗಿರುವುದು ಉದಯನನಿಗೆ ಗೋಚರವಾಯಿತು. ಮನುಷ್ಯರ ಅಂಗಗಳಲ್ಲಿ "ಅಡಿಗಳೇ ಆಳುಗಳು ; ತೋಳ್ ಮಡದಿ ; ಹಲ್ಲು ಮಕ್ಕಳು ; ಕಣ್ಣು ಗೆಳೆಯರು ; ತಲೆ ತಾಯಿ ತಂದೆಗಳು" ಎಂಬ ಹೇಳಿಕೆ ನೆನಪಾಯಿತು. "ನಮ್ಮ ಗೆಳೆಯರು ನಾಲ್ವರಲ್ಲಿ ಮೇಲ್ಪಟ್ಟವನಾದ ಯೂಗಿಗೆ ಏನೋ ಕೇಡಾಗಿರಬೇಕು" ಎಂದು ಕಳವಳಗೊಂಡು ಶಾಂಕಿಯ

ತಾಯ ಮುಖ ನೋಡಿದನು.

ಆಗ ಆಕೆ, ಅವಲಕ್ಕಿ ತಿಂದು ಯೂಗಿ ಸತ್ತ ಸುದ್ದಿಯನ್ನು ತಿಳಿಸಿದಳು. ಒಡನೆಯೇ ಉದಯನನು ಕೀಲು ಕೆಟ್ಟ ಯಂತ್ರದಂತೆ ಕೆಳಗುರುಳಿ ಮೈ ಮರೆತನು. ಅದನ್ನು ಕಂಡು ವಾಸವದತ್ತೆಯೂ ಅವನೆದೆಯಮೇಲೆ ಬಿದ್ದಳು. ಶೈತ್ಯೋಪಚಾರದಿಂದ ಉದಯನನು ಮೂರ್ಛೆ ತಿಳಿದಿದ್ದನು. ಕಣ್ಣೀರು ಉಕ್ಕುಕ್ಕಿ ಸುರಿಯುತ್ತಿರಲು ಗೆಳೆಯನ ಗುಣಗಳನ್ನೂ ಅವನಿಂದ ತನಗಾದ ಉಪಕಾರಗಳನ್ನೂ ನೆನೆನೆನೆದು ವ್ಯಥೆಪಡುತ್ತಿದ್ದನು. "ನನ್ನನ್ನು ಸೆರೆಯಿಂದ ಬಿಡಿಸಿ, ಹಿಂದೆಯೇ ಬರುವೆನೆಂದು ಕಳಿಸಿದೆಯಲ್ಲಾ ! ಹೀಗೆ ಹುಸಿ ನುಡಿಯಬಹುದೆ ?" ಎಂದು ಹಂಬಲಿಸಿದನು.

"ವಿರೋಧಿಗಳೆದುರಿಗೆ ಹೀಗೆ ವ್ಯಥೆಪಡುವುದು ರಾಜತ್ವಕ್ಕೆ ತಕ್ಕದ್ದಲ್ಲ. ಮನಸ್ಸು ಸಡಿಲ ಬಿಡದೆ ಹಿಡಿತದಲ್ಲಿಟ್ಟುಕೊಳ್ಳಬೇಕು. ಇದರಿಂದ ಮೇಲಾಗುತ್ತದೆ" ಎಂದು ಗೆಳೆಯರು ಹಿತನುಡಿದರು. ದುಃಖ ಹೃದಯವನ್ನು ಕೊರೆಯುತ್ತಿದ್ದರೂ ಉದಯನನು ಅವರ ಮಾತಿಗೆ ಬೆಲೆ ಕೊಟ್ಟು ಸಮಾಧಾನ ಹೊಂದಿದಂತೆ ನಡೆದುಕೊಳ್ಳುತ್ತಿದ್ದನು. ಆದರೂ ಕೃಷ್ಣಪಕ್ಷದ ಚಂದ್ರನಂತೆ ದಿನದಿನಕ್ಕೆ ಕಳೆಗುಂದುತ್ತಿದ್ದನು.

"ಎಲ್ಲ ಕಾರ್ಯಗಳನ್ನೂ ಯೂಗಿಯಂತೆಯೇ ಚೆನ್ನಾಗಿ ನಿರ್ವಹಿಸಬಲ್ಲವನು ರುಮಣ್ವಂತನೇ ಸರಿ" ಎಂದು ನಿಶ್ಚಯಿಸಿ ಯೂಗಿಯ ಕಾರ್ಯಗಳನ್ನೆಲ್ಲ ಅವನಿಗೆ ಒಪ್ಪಿಸಿದರು. ಅರಸನ ಕೊರಗನ್ನು ಕಡಿಮೆಮಾಡಲು ರುಮಣ್ವಂತನು ಹಲವು ಉಪಾಯಗಳನ್ನು ಆಲೋಚಿಸಿದನು. ವನವಿಹಾರ, ನೀರಾಟ, ಔತಣದೂಟ, ಬೇಟೆ ಮೊದಲಾದುವುಗಳಿಂದ ವಿನೋದಪಡಿಸಲು ಪ್ರಯತ್ನಿಸಿದನು. "ಆಶ್ರಮದಲ್ಲಿರುವ ಮುನಿಗಳು ಹಿಂದೆ ನಡೆದದ್ದನ್ನೂ ಮುಂದೆ ನಡೆಯುವುದನ್ನೂ ಅರಿಯಬಲ್ಲರು. ಅವರನ್ನು ಕೇಳಿದರೆ ನಿಜಸ್ಥಿತಿ ತಿಳಿದೀತು !" ಎಂದು ಉದಯನನಿಗೆ ಬೇರೆ ಗೆಳೆಯರ ಮೂಲಕ ಸೂಚಿಸಿದನು.

"ಹಾಗೆ ಹೇಳುವವರೂ ಇದ್ದಾರೆಯೆ ?" ಎಂದು ಉದಯನನು ಕೇಳಿದನು. ರುಮಣ್ವಂತನು ಅವನ ಬಾಲ್ಯದ ಕಥೆಯನ್ನು ಹೇಳಿದನು : "ನಿಮ್ಮ ತಾಯಿ ಮೃಗಾವತಿಯನ್ನು ಶರಭಪಕ್ಷಿ ಎತ್ತಿಕೊಂಡು ಹೋದ ಮೇಲೆ,

ವಿಪುಲಗಿರಿಯಲ್ಲಿ ನೀನು ಹುಟ್ಟಿ ಬೆಳೆಯುತ್ತಿದ್ದೆಯಷ್ಟೆ. ಅದನ್ನರಿಯದೆ ನಿಮ್ಮ ತಂದೆ ಬಹು ಕಾಲ ದುಃಖದಲ್ಲಿ ಮುಳುಗಿದ್ದನು. ಒಮ್ಮೆ ಮುನಿಯೊಬ್ಬರನ್ನು ವಂದಿಸಿ ಕೇಳಲು ಅವರು ತಮ್ಮ ದಿವ್ಯಜ್ಞಾನದಿಂದ ಸಂಗತಿಯನ್ನು ಅರಿತು ತಿಳಿಸಿದರು. ಆ ಮೇಲೆ ಶತಾನೀಕ ಮಹಾರಾಜನು ನಿನ್ನನ್ನೂ ನಿಮ್ಮ ತಾಯಿಯನ್ನೂ ಕೌಶಾಂಬಿಗೆ ಕರೆತಂದನು" ಎಂದನು. "ಈಗ ನಾವೂ ಮುನಿಗಳನ್ನು ಕೇಳೋಣ. ಯೂಗಿ ಸತ್ತು ಮಾಡಬೇಕಾದ ಕೆಲಸ ಇನ್ನೂ ಏನಾದರೂ ಇದ್ದರೂ ಇರಬಹುದು" ಎಂದು ಸಂಶಯಬಿತ್ತಿದನು.

## ೨೭ ಮುನಿಯ ಭವಿಷ್ಯ

ಲಾವಾಣ ನಗರದ ಹತ್ತಿರ ಇರುವ ಬೆಟ್ಟದ ತಪ್ಪಲಿನ ಒಂದು ಆಶ್ರಮದಲ್ಲಿ ಅಂಥ ಮುನಿಗಳೊಬ್ಬರಿರುವುದಾಗಿ ಕೇಳಿ ಉದಯನು ಅಲ್ಲಿಗೆಹೋಗ ಬಯಸಿದನು. ಶುಭಮುಹೂರ್ತದಲ್ಲಿ ಚತುರಂಗ ಬಲದೊಡನೆ ಜಯಂತಿ ನಗರವನ್ನು ಬಿಟ್ಟು ಲಾವಾಣದ ಕಡೆಗೆ ಪ್ರಯಾಣ ಮಾಡಿದನು. ಮುನಿಗಳಿಂದ ಮಿತ್ರನ ವಿಚಾರವನ್ನು ಕೇಳಬೇಕೆಂಬ ಕುತೂಹಲದಲ್ಲಿ ನಗರಕ್ಕೆ ಹೋಗಲು ಮನಸ್ಸಾಗಲಿಲ್ಲ; ನೇರವಾಗಿ ಆಶ್ರಮವಿದ್ದ ಬೆಟ್ಟದ ಕಡೆಗೆ ಹೋದನು.

ಮರಗಿಡಗಳೂ ಬಳ್ಳಿಗಳೂ ಹಲಬಗೆಯ ಹೂ ಗಿಡಗಳೂ ತುಂಬಿ ಮನೋಹರವಾದ ಆ ಬೆಟ್ಟದ ಕಿಬ್ಬರಿಯಲ್ಲಿ ಬೀಡು ಬಿಟ್ಟಿತು. ಬಿಳಿಯ ಗುಡಾರಗಳೂ ತೊಲೆಯ ಮಂಟಪಗಳೂ ತೊಟ್ಟಿಗಳೂ ಸಭೆಗಳೂ ಬೀದಿ ಬೀದಿಯಾಗಿ ಅಣಿಗೊಂಡು ಆ ಬೀಡು ಸೊಗಸಾಗಿ ಕಾಣುತ್ತಿತ್ತು. ಅಂತಃಪುರದವರನ್ನು ಅಲ್ಲಿ ನಿಲ್ಲಿಸಿ ಬೀಡಿಗೆ ತಕ್ಕ ಕಾವು ಗೊತ್ತುಮಾಡಿ, ಮಿತ್ರ ಪರಿವಾರದೊಡನೆ ಉದಯನನು ಆಶ್ರಮಕ್ಕೆ ಹೊರಟನು.

ಎಲ್ಲ ಕೊರತೆಗಳನ್ನೂ ನೀಗಿ ಶಾಂತರಾದ ಹಿರಿಯರು ನೆಲಸಿದ್ದ ಆ ಸ್ಥಳದಲ್ಲಿ ಭಯಕ್ಕೆ ಸ್ವಲ್ಪವೂ ಎಡೆಯಿರಲಿಲ್ಲ. ಅಲ್ಲಿಗೆ ಯಾರ ಕಾವಲೂ

ಬೇಕಾಗಿರಲಿಲ್ಲ. ಎಲ್ಲ ಸಮೃದ್ಧಿಯಿಂದಲೂ ತುಂಬಿ ಕಂಗೊಳಿಸುತ್ತಿತ್ತು. ಅಲ್ಲಿನ ಮರಗಳು ಹೂವಿನ ಮಣೆ ಹಾಕಿ, ತಳಿರ ಕೊಡೆ ಹಿಡಿದು, ಹೂ ಗೊನೆಯ ಚವರಿ ಬೀಸಿ, ತುಂಬಿ ಕೋಗಿಲೆಗಳ ಮೆಲ್ಲುಲಿಯಿಂದ ಕುಶಲ ಪ್ರಶ್ನೆಮಾಡಿ ಮನಸ್ಸಂತೋಷಪಡಿಸಿ, ಕೊಂಬೆಗೈಗಳಲ್ಲಿ ಅಮೃತಮಯವಾದ ಹಣ್ಣುಗಳನ್ನು ಎತ್ತಿ ಹಿಡಿದು ಕೊಡುತ್ತ, ಆಶ್ರಮಕ್ಕೆ ಬಂದ ಅತಿಥಿಗಳನ್ನು ಆದರಿಸಿ ಉಪಚರಿಸುತ್ತಿದ್ದವು.

ಉದಯನನು ಮುನಿಗಳಿಗೆ ತನ್ನ ಬರವನ್ನು ಹೇಳಿ ಕಳಿಸಿ ತಿಳಿಸಿ ಅಪ್ಪಣೆ ಪಡೆದು ಆಶ್ರಮವನ್ನು ಒಳಹೊಕ್ಕನು ; ಬಳಿಸಾರಿ ವಂದಿಸಿದನು. ಮುನಿಗಳ ಆಶೀರ್ವಾದ ಪಡೆದು ಅವರು ತೋರಿಸಿದ ಪೀಠದ ಮೇಲೆ ಕುಳಿತು ಕೊಂಡನು. ಸ್ವಲ್ಪ ತಡೆದು ಎದ್ದು ಪಕ್ಕದಲ್ಲಿನ ಮರವೊಂದರ ಬುಡ ವನ್ನು ಸೇರಿ ಯೂಗಿಯನ್ನೇ ನೆನೆಯುತ್ತಾ ಕುಳಿತನು. ಹಾಗಿರುವಾಗ ಅವನು ಹಿಡಿದಿದ್ದ ಬಿಳಿಯ ಹೂವೊಂದು ಕೈಯಿಂದ ಜಾರಿ ಕಾಲಬಳಿ ಬಿತ್ತು. ಅದನ್ನು ಕಂಡ ಮುನಿಗಳು ನಿಮಿತ್ತ ಶಾಸ್ತ್ರ ಬಲದಿಂದ ಪ್ರಶ್ನೆಯನ್ನೂಹಿಸಿ ಹೀಗೆ ಉತ್ತರ ಹೇಳಿದರು ; ಅರಸಾ, ನೀನು ಹಸಿಯ ಮರವನ್ನು ಸೇರಿ ಕುಳಿತಿದ್ದು ನಿನ್ನ ಗೆಳೆಯನು ಜೀವದಿಂದಿರುವುದನ್ನು ಸೂಚಿಸುತ್ತದೆ. ಅವನು ಮತ್ತೆ ನಿನ್ನನ್ನು ಬಂದು ಸೇರುತ್ತಾನೆ. ಹಿಡಿದ ಹೂವು ಜಾರಿ ಬಿದ್ದಿದ್ದರಿಂದ ಈಗ ನೀನು ಅನುಭವಿಸುತ್ತಿರುವ ಭೋಗಕ್ಕೆ ವಿಘ್ನವುಂಟಾಗುತ್ತದೆ. ಅದು ನಿನ್ನ ಕಾಲ ಬಳಿಯೇ ಬಿದ್ದಿದ್ದರಿಂದ ಆ ಭೋಗವನ್ನು ಮತ್ತೆ ಪಡೆಯುತ್ತೀಯೆ ನೀನು ನೆಲದ ಮೇಲೆ ಕೂತದ್ದು ನಿನ್ನ ರಾಜ್ಯ ನಿನಗೆ ಮತ್ತೆ ವಶವಾಗುವುದನ್ನು ಸೂಚಿಸುತ್ತದೆ. ಸ್ವಲ್ಪವೂ ಸಂದೇಹವಿಲ್ಲ" ಎಂದರು.

ಮುನಿಗಳು ಹೇಳಿದ ಭರವಸೆಯ ಮಾತು ಕೇಳಿ ಉದಯನನನ್ನು ಕವಿದಿದ್ದ ನಿರಾಸೆಯ ಕತ್ತಲೆ ಕರಗಿತು ; ಆಸೆಯ ಕುಡಿಬೆಳಕು ಮೂಡಿತು. ಅವರಿಗೆ ನಮಸ್ಕಾರ ಮಾಡಿ ಅಪ್ಪಣೆ ಪಡೆದು ಹೊರ ಬಂದನು. "ಇವರ ಅನುಗ್ರಹದ ನುಡಿ ನಿಜವಾಗಿಯೇ ಇರಬೇಕು" ಎಂದು ನಂಬಿ ಒಂದು ಬಗೆಯಲ್ಲಿ ನಿಶ್ಚಿಂತನಾದನು. ಬೀಡಿಗೆ ಹಿಂದಿರುಗಿ, ತನಗಾಗಿ ಅಣಿ ಮಾಡಿದ್ದ ಪಟಮಾಡದಲ್ಲಿ ವಾಸವದತ್ತೆಯೊಡನೆ ವಾಸಮಾಡುತ್ತಿದ್ದನು.

# ೨೮ ವನ ವಿಹಾರ

ಆ ಬೀಡು ಮನೋಹರವಾದ ವನದ ಮಧ್ಯದಲ್ಲಿತ್ತು. ಉದಯನನು ವಾಸವದತ್ತೆಯೊಡನೆ ದಿನದಿನವೂ ಆ ವನದಲ್ಲಿ ಬೇರೆ ಬೇರೆ ಸ್ಥಳಗಳಿಗೆ ಹೋಗಿ ಆನಂದಿಸುತ್ತಿದ್ದನು.

ಒಮ್ಮೊಮ್ಮೆ ಕಾಡುತೊರೆಗಳ ಹೊನಲಿನಲ್ಲಿಳಿದು ನೀರಾಡುವನು; ಕಡಿದಾದ ದಡಗಳಿಂದ ದುಮುಕಿ ಸುರಿಯುವ ನೀರ್ಬೀಳುಗಳ ಕೆಳಗೆ ನಿಂತು ಮೈತೊಳೆದು ನಲಿಯುವನು; ಆಳವಾದ ಮಡುಗಳಲ್ಲಿ ಮುಳುಗಿ ಈಜಿ ಸಂತೋಷಿಸುವನು. ಹಲವು ರಂಗಿನ ಹೂವುಗಳು ಅರಳಿ ಮುಚ್ಚಳ ತೆರೆದ ಒಡವೆ ಪೆಟ್ಟಿಗೆಯಂತೆ ಕಂಗೊಳಿಸುವ ಕಿರುಬಾಯ ದೊಣೆಗಳ ಬಳಿ ಹೋಗಿ ಅಂದಕ್ಕೆ ಮರುಳಾಗಿ ದಿಟ್ಟಿಸುತ್ತ ಕೂರುವನು. ಆ ದೋಣೆಗಳಲ್ಲಿ ಕೈಯಾಡಿಸಿ ಮದ್ದಳೆಯ ಸದ್ದನ್ನೆಬ್ಬಿಸುವನು, ಆ ಉಲಿಯ ತಾಳಕ್ಕೆ ತಕ್ಕಂತೆ ಹಾಡುವನು; ಹೂದಂಡೆ ಮುಡಿದು ಚಿಗುರೊಡವೆ ತೊಟ್ಟು ಮಾಲೆ ಧರಿಸಿದ ಹಲವು ಹೆಂಗಸರು ವನದೇವತೆಯಂತೆ ಸುತ್ತ ನೆರೆದು ಆ ತಾಳಕ್ಕೂ ಆ ಹಾಡಿಗೂ ಹೊಂದುವಂತೆ ನರ್ತಿಸುವರು. ಆ ನರ್ತನವನ್ನು ನೋಡಿ ಉದಯನ ಮೈ ಮರೆಯುವನು.

ಒಮ್ಮೊಮ್ಮೆ ಆ ಕಾಡಿನಲ್ಲಿರುವ ಬೇಡವಳ್ಳಿಗಳನ್ನು ನೋಡಿ ಬರುವನು. ಬಂಡೆಯ ಒರಳಿನಲ್ಲಿ ಕಾಡು ನೆಲ್ಲನ್ನು ಸುರಿದು ಆನೆಯ ಕೊಂಬಿನ ಒನಕೆ ಹಿಡಿದು, ತಮ್ಮೊಡೆಯರ ಗುಣಗಳನ್ನು ಹೊಗಳುವ ಹಾಡು ಹೇಳುತ್ತ ಹಸಿ ಯವಲಕ್ಕಿ ಕುಟ್ಟುವ ಬೇಡಿತಿಯರ ಸುವ್ವಿ ಹಾಡುಗಳನ್ನೂ ಒನಕೆ ಹಾಡುಗಳನ್ನೂ ಕೇಳಿ ಮೆಚ್ಚಿ ತಲೆದೂಗುವನು. ಬೇಡರ ಆಟಪಾಟಗಳನ್ನು ನೋಡಿ ಕೇಳಿ ನಲಿಯುವನು.

ಒಡನೆಬಂದ ಮಡದಿಯರು ಬಿಳಿಮುತ್ತುಗಳಿಂದ ಕಿರುಮನೆಗಳನ್ನು ಕಟ್ಟುವರು; ಹಳದಿ ಬಣ್ಣದ ಹೂವುಗಳನ್ನು ಕಿತ್ತು ಹೊನ್ನೊಡವೆಗಳಿಂದು ಅಲಂಕರಿಸುವರು; ಅಶೋಕದ ಕೊಂಬೆಗಳಲ್ಲಿ ಎಲೆಬಳ್ಳಿಯ ಹಗ್ಗ ಕಟ್ಟಿಕೊಂಡು ಉಯ್ಯಾಲೆ ಆಡುವರು; ಬಗೆ ಬಗೆಯ ಹೂ ಕುಯ್ದು ಮಾಲೆ

ಕಟ್ಟುವರು ; ಚಿಗುರನ್ನು ಕೈಯಲ್ಲಿ ತೆಗೆದುಕೊಂಡು ಉಗುರಿನಿಂದ ಗೀರಿ ತೆಗೆದು ಅನೇಕ ರೀತಿಯ ವಿಚಿತ್ರ ರೂಪುಗಳನ್ನು ರಚಿಸುವರು ; ವಾಸವ ದತ್ತೆಯ ವೈಭವವನ್ನು ಹೊಗಳಿ ಹಾಡುತ್ತ, ಮರದ ನೆರಳಿನಲ್ಲಿ ಎದುರು ಬದುರಾಗಿ ನಿಂತು ಬಳೆಯುಲಿಯನ್ನೆಬ್ಬಿಸುತ್ತ ಕೈತಟ್ಟಿ ನಾಟ್ಯವಾಡುವರು ; ಚೆಂಡಾಡುವರು ; ತಳಿರು ಹಾಸಿಗೆಯ ಮೇಲೆ ಮಲಗಿ ನಿದ್ರಿಸುವರು.

ಉದಯನ ವಾಸವದತ್ತೆಯರು ಈ ವಿನೋದಗಳಲ್ಲೆಲ್ಲ ಬೆರೆಯುವರು. ಹೂವಿನೋಲೆಯ ಹೆಂಗಸರು ಹೊಂಬಟ್ಟಲಲ್ಲಿ ಎತ್ತಿ ಎರೆಯುವ ಜೇನನ್ನೂ ಬಗೆಬಗೆಯ ಪಾನೀಯಗಳನ್ನೂ ಕುಡಿದು ತಣಿಯುವರು. ಒಂದು ಜೀವ ವುಳ್ಳ ಎರಡು ತಲೆಯ ಹಕ್ಕಿಯಂತೆ ಸುಖಪಡುವರು.

ಹೀಗಿರುವಲ್ಲಿ ಒಂದು ದಿನ ಉದಯನನು ವಸಂತಕನೊಡನೆ ಒಂದು ತೋಪಿನಲ್ಲಿ ಅಶೋಕದ ನೆರಳಿನಲ್ಲಿ ಕುಳಿತಿದ್ದನು. ವಾಸವದತ್ತೆ ಕಾಂಚನ ಮಾಲೆಯೊಡನೆ ವನ ಸಮೃದ್ಧಿಯನ್ನು ನೋಡುವುದಕ್ಕೆಂದು ಬೇರೊಂದು ಕಡೆ ಹೋಗಿದ್ದಳು. ಆ ಸಮೀಪದ ತಪೋವನದಲ್ಲಿ ರಾಜ್ಯಭಾರವನ್ನು ತೊರೆದು ಬಂದ ರಾಜರ್ಷಿಯೊಬ್ಬರಿದ್ದರು. ಅವರ ಮಗಳು ವಿರಚಿಕೆಯೆಂಬ ಕಿರುಹರೆಯದ ಚೆಲುವೆ ಅತ್ತಿತ್ತ ಸುತ್ತಾಡುತ್ತ ಉದಯನಿದ್ದ ಅಶೋಕ ವೃಕ್ಷದ ಬಳಿ ಬಂದಳು. ಅವಳು ಮುನಿಗಳನ್ನಲ್ಲದೆ ಬೇರೆ ಗಂಡಸರನ್ನು ಕಂಡೇ ಇರಲಿಲ್ಲ. ಉದಯನನ್ನು ಕಂಡು ಅವನೇ ಕಾಮದೇವನೆಂದು ಕೊಂಡಳು. ತನ್ನ ಚೆಂಡು ಬೊಂಬೆಗಳನ್ನು ಒಂದುಕಡೆಇಟ್ಟು ನಂದ್ಯಾವರ್ತ, ಸಿಂಧುವಾರ, ಶೇಫಾಲಿಕೆ, ಚಂಪಕ ಮೊದಲಾದ ಹೂವುಗಳನ್ನು ಕುಯ್ದು ಬೊಗಸೆಯಲ್ಲಿ ತುಂಬಿಕೊಂಡು ಅವನ ಬಳಿ ಬಂದಳು. "ಅಯ್ಯಾ ! ಈ ಹೂವುಗಳನ್ನು ಮಾಲೆ ಕಟ್ಟಿಕೊಡಿ. ನಾನೂ ಬೊಂಬೆಯೂ ಅಲಂಕರಿಸಿ ಕೊಳ್ಳುತ್ತೇವೆ" ಎಂದು ಹೂವುಗಳನ್ನು ಅವನ ಮುಂದೆ ಸುರಿದಳು.

ಅವಳ ಚೆಲುವನ್ನು ನೋಡಿ ಉದಯನನಿಗೆ "ಇವಳು ಈ ವನದ ಅಧಿ ದೇವತೆಯೊ !" ಎಂದು ಭ್ರಾಂತಿಯಾಯಿತು. ಕಣ್ಣೆವೆ ಆಡುತ್ತಿರುವುದನ್ನು ಕಂಡು ಇವಳು ಮಾನವಿಯೆಂದು ಅರಿತನು. ಆಮೇಲೆ ತನ್ನ ಉತ್ತರೀಯ ವನ್ನು ಹರಡಿ ಆ ಹೂವುಗಳನ್ನು ತೆಗೆದುಕೊಂಡು ಮಾಲೆ ಕಟ್ಟತೊಡಗಿದನು.

ಹಲವು ಬಣ್ಣದ ಮಣಿಗಳು ಬಣ್ಣ ಮಾರ್ಪಡುತ್ತಿರುವಂತೆ ಕೆತ್ತಿರುವ ರತ್ನ ಮಾಲೆಯಂತೆ ತೋರುವ ಹಾಗೆ ಹಲವು ಬಗೆಯ ಬಣ್ಣವುಳ್ಳ ಹೂವುಗಳನ್ನು ತಕ್ಕ ತಕ್ಕ ಕಡೆಗಳಲ್ಲಿ ಇಟ್ಟು ಮಾಲೆಗಳನ್ನು ಕಟ್ಟಿಕೊಟ್ಟನು. ಆ ಮಾಲೆಗಳನ್ನು ಅಲಂಕರಿಸಿಕೊಳ್ಳುವುದಕ್ಕೆ ಅರಿಯದೆ ಅವಳು ಪೇಚಾಡುತ್ತಿದ್ದಳು. ಅದನ್ನರಿತ ಉದಯನನು ಅವಳನ್ನು ಹತ್ತಿರ ಕರೆದು ಮಾಲೆಗಳನ್ನು ಮುಡಿಸಿ ಅಲಂಕರಿಸಿ, ಕೊಂಡಾಡಿ, 'ಮೆಲ್ಲನೆ ಹೋಗು' ಎಂದು ಎಚ್ಚರಿಸಿ ಕಳಿಸಿಕೊಟ್ಟನು.

ಉದಯನನನ್ನಗಲಿದ ಒಂದು ಗಳಿಗೆ ಒಂದು ವರ್ಷವಾಗಿ ತೋರಿತು ವಾಸವದತ್ತೆಗೆ. ಆಕೆ ಹೆಚ್ಚು ಹೊತ್ತು ಅಗಲಿರಲಾರದೆ ಹಿಂದಿರುಗಿ ಬೇಗ ಬೇಗ ಬರುತ್ತಿದ್ದಳು. ಎದುರಿಗೆ ವಿರಚಿಕೆ ಸಿಕ್ಕಿದಳು. ಅವಳ ಅಲಂಕಾರವನ್ನೂ ಹೂಮಾಲೆಗಳನ್ನೂ ನೋಡಿ, ಹಾಗೆ ಹೂ ಕಟ್ಟಿ ಮುಡಿಸಿದವನು ಉದಯನನೇ ಸರಿಯೆಂದು ನಿಶ್ಚಯಿಸಿಕೊಂಡಳು. ಬಹು ದುಃಖವಾಯಿತು. ಕೋಪವೂ ಬಂತು. ಕಣ್ಣಿನಿಂದ ಕಂಬನಿ ಸುರಿಸುತ್ತ ಆ ತೋಪಿನ ಬೇರೊಂದು ಪಕ್ಕಕ್ಕೆ ಹೋಗಿ ಸೇರಿದಳು.

ಕಾಂಚನಮಾಲೆಯಿಂದ ಈ ಸಂಗತಿಯನ್ನರಿತು ಉದಯನನು ಬೇಗ ವಾಸವದತ್ತೆಯ ಬಳಿ ಹೋದನು. ಹೋಗಿ ನಾನಾ ಬಗೆಯಲ್ಲಿ ಉಪಚರಿಸಿ ಸಮಾಧಾನ ಹೇಳಿದನು. ಆದರೂ ವಾಸವದತ್ತೆ ಮುನಿಸು ತಣಿಯದೆ ದೂರ ದೂರವಾಗಿಯೇ ನಿಂತಳು. ಆಗ ಒಂದು ದೊಡ್ಡ ಕಪಿ ತಟ್ಟನೆ ನೆಗೆದು ಬಂತು. ವಾಸವದತ್ತೆ ಅಂಜಿ ತಟ್ಟನೆ ಓಡಿಬಂದು ಉದಯನನನ್ನು ತಬ್ಬಿಕೊಂಡಳು. ಮುನಿಸು ಮಾಯವಾಯಿತು.

ಹೀಗೆ ವನದಲ್ಲಿ ವಿಹರಿಸುತ್ತ ಇಬ್ಬರೂ ಆನಂದದಿಂದ ಕೆಲವು ಕಾಲ ಕಳೆದರು.

## ೨೯ ಅರಮನೆಗೆ ಬೆಂಕಿ

ಇಷ್ಟರಲ್ಲಿ ಲಾವಣ ನಗರದಲ್ಲಿನ ಅರಮನೆಗೂಊರ ಹೊರಗೆ ಯೂಗಿ ತಂಗಿದ್ದ ರಹಸ್ಯಸ್ಥಳಕ್ಕೂ ಸುರಂಗ ಮಾರ್ಗವೊಂದು ಸಿದ್ಧವಾಯಿತು.

ಆಮೇಲೆ ಶಾಂಕಿಯತಾಯಿ ಉದಯನನ ಬಳಿ ಹೋಗಿ, "ಅರಸೇ, ಕ್ರೂರ ಮೃಗಗಳ ನೆಲೆಮನೆಯಾದ ಕಾಡಿನಲ್ಲೇ ಕಾಲ ಕಳೆಯುತ್ತಿದ್ದರೆ ವಾಸವದತ್ತೆ ಭಯಪಟ್ಟಾಳು. ಆದ್ದರಿಂದ ಹತ್ತಿರದಲ್ಲಿರುವ ಲಾವಾಣ ನಗರದ ಅರಮನೆಯಲ್ಲಿದ್ದು ಆಗಾಗ ಇಲ್ಲಿ ಬಂದು ಹೋಗುತ್ತಿರುವುದು ಮೇಲೆಂದು ತೋರುತ್ತದೆ" ಎಂದು ಸಲಹೆ ಮಾಡಿದಳು. ಆ ಸಲಹೆ ಉದಯನನಿಗೆ ಸರಿಯಾಗಿ ಕಂಡಿತು. ಪರಿವಾರ ಸಮೇತನಾಗಿ ಅ ನಗರವನ್ನು ಸೇರಿ ಸುಖವಾಗಿ ಬಾಳುತ್ತಿದ್ದನು.

ಅಲ್ಲಿಯೂ ಉದಯನನು ವಾಸವದತ್ತೆಯನ್ನು ಒಂದು ಗಳಿಗೆಯೂ ಬಿಟ್ಟಗಲುತ್ತಿರಲಿಲ್ಲ. ಗೆಳೆಯರು ಎಷ್ಟು ಹೇಳಿದರೂ ಅರಸಿಯನ್ನು ಬಿಟ್ಟು ತಾನೊಬ್ಬನೇ ಇರಬೇಕಾದ ಯಾವ ಕಾರ್ಯಕ್ಕೂ ಮನಸ್ಸು ಕೊಡುತ್ತಿರಲಿಲ್ಲ. ಹೀಗಿರುವಲ್ಲಿ ಒಂದು ದಿನ ವಾಸವದತ್ತೆ ದಟ್ಟಡವಿಯ ನಡುವೆ ದೊರೆಯುವ ಕೆಲವು ಬಗೆಯ ಹೂ ಚಿಗುರೆಲೆಗಳ ಹೆಸರು ಹೇಳಿ ಅವನ್ನು ತಂದು ಕೊಡಬೇಕೆಂದು ಪ್ರಾರ್ಥಿಸಿದಳು. ಮರುದಿನ ಬೆಳಗ್ಗೆ ಉದಯನನು ಕುದುರೆಯೇರಿ ಬೇಟೆಗಾರರೊಡನೆ ಕಾಡಿಗೆ ಹೋದನು.

ತಮ್ಮೆಣಿಕೆಯನ್ನುನಡೆಸುವುದಕ್ಕೆ ತಕ್ಕ ಸಮಯ ಒದಗಿತೆಂದು ಮಂತ್ರಿಗಳು ಸಂತೋಷಿಸಿದರು. ಅರಸನ ನಿರುತ್ಸಾಹವನ್ನು ಕಂಡು ಕಾಡು ಬೇಡರು ಕೊಳ್ಳೆಗಾಗಿ ಊರನ್ನು ಮುತ್ತಿದರೆಂದು ಸುದ್ದಿ ಹಬ್ಬಿತು. ಕೆಲಸದಾಳುಗಳು ಅರಮನೆಯ ನಾಲ್ಕು ಕಡೆಗೂ ಬೆಂಕಿ ಹೊತ್ತಿಸಿದರು. ಎಲ್ಲೆಲ್ಲಿಯೂ ಬೆಂಕಿ ಹರಡುತ್ತಿರಲು ರುಮಣ್ವಂತನು ಅಂತಃಪುರವನ್ನು ಹೊಕ್ಕು ವಾಸವದತ್ತೆಯನ್ನು ಕಂಡನು. ಹೊರಹೋಗುವುದಕ್ಕೆ ಸಾಧ್ಯವಾಗದೆ ಪೇಚಾಡುತ್ತಿದ್ದ ವಾಸವದತ್ತೆಗೆ ಸುರಂಗವನ್ನು ತೋರಿಸಿ ಆಮಾರ್ಗವಾಗಿ ಅವಳನ್ನು ಶಾಂಕಿಯ ತಾಯಿಯೊಡನೆ ಕಳಿಸಿಕೊಟ್ಟನು. ಆಮೇಲೆ ಮರಣದಂಡನೆಗೆ ಗುರಿಯಾಗಿದ್ದ ಇಬ್ಬರು ಸೆರೆಯಾಳುಗಳನ್ನು ಬಲಾತ್ಕಾರವಾಗಿ ಅಲ್ಲಿ ಹೊಗಿಸಿದನು. ವಾಸವದತ್ತೆಯ ಒಡವೆಗಳನ್ನು ಅಲ್ಲಲ್ಲೆ ಚೆದರಿಸಿ ಬೀಳಿಸಿದನು. ಕಡೆಗೆ,ಅರಮನೆಗೆ ಬೆಂಕಿಯಿಟ್ಟ ಹುಸಿ ಕಳ್ಳರನ್ನು ಎದುರಿಸಿ ನಗರದಿಂದ ಹೊರಡಿಸಿ ಅಟ್ಟಿಕೊಂಡು ಹೋದನು.

ಈ ಆಕಸ್ಮಿಕಕ್ಕೆ ವಾಸವದತ್ತೆ ಅಂಜಿದಳು. ಶಾಂಕಿಯ ತಾಯಿ,

"ಮಗಳೇ, ಅಂಜಬೇಡ. ನಿನ್ನ ಪ್ರಾಣನಾಯಕನಿಗೆ ಏಳಿಗೆಯುಂಟುಮಾಡಬೇಕೆಂದು ಮಂತ್ರಿಗಳು ಮಾಡಿದ ಉಪಾಯ ಇದು" ಎಂದು ಧೈರ್ಯ ಹೇಳುತ್ತಾ ಯೂಗಿಯಿದ್ದ ಬಳಿಗೆ ಕರೆದುಕೊಂಡು ಹೋದಳು. ಯೂಗಿಯು ಸುರಂಗ ಮಾರ್ಗದಿಂದ ಬಂದ ರಾಣಿಯನ್ನು ಕಂಡು ನಮಸ್ಕಾರ ಮಾಡಿ ಆದರಿಸಿದನು. "ತಾಯೇ, ವೀರಮಹಾಸೇನನ ಮಗಳೇ, ಕೃಪೆ ಮಾಡು. ನಿಮ್ಮ ತಂದೆಯಿಂದ ನಮ್ಮರಸ ಸೆರೆಗೊಳಗಾಗಿದ್ದಾಗ ಪಾಂಚಾಲ ರಾಜನು ದಂಡೆತ್ತಿ ಬಂದು ಕೌಶಾಂಬಿಯನ್ನು ವಶಪಡಿಸಿಕೊಂಡನು. ಪಿಂಗಳ ಕಟುಕರು ಅಂಜಿ ಓಡಿದರು. ಈಗ ನಮ್ಮ ದೊರೆ ಅದೊಂದನ್ನೂ ನೆನೆಯದೆ ಸದಾ ನಿನ್ನೊಡನೆ ಕಾಲ ಕಳೆಯುತ್ತಿದ್ದಾನೆ. ಹಗೆಯನ್ನು ಹೊರದೂಡಿ ಮತ್ತೆ ರಾಜ್ಯ ಪದವಿಯಲ್ಲಿ ಅವನನ್ನು ನೆಲೆಗೊಳಿಸಬೇಕಾದರೆ, ಕೆಲವುಕಾಲ ನೀನು ಅವನನ್ನು ಅಗಲಿರಬೇಕಾಗುತ್ತದೆ. ಕುಲಕ್ಕೆ ಬಂದ ಕುಂದನ್ನು ದೂರಮಾಡಿ ಪತಿಗೆ ಏಳಿಗೆ ತರುವುದಕ್ಕಾಗಿ ನಿನ್ನ ದೈವೀಕ ಪಾತಿವ್ರತ್ಯದ ಬಲದಿಂದ ಈ ವರವನ್ನು ನೀಡಬೇಕು" ಎಂದು ಬೇಡಿಕೊಂಡನು.

"ನಮ್ಮರಸನ ನಾಲ್ವರು ಮಂತ್ರಿಗಳಲ್ಲಿ ಯೂಗಿ ಸತ್ತನು. ಇವನು ವೃಷಭಕ ಮೊದಲಾದ ಮೂವರಲ್ಲಿ ಒಬ್ಬನೂ ಅಲ್ಲ. ಇವನು ಯಾರೋ ?" ಎಂದು ವಾಸವದತ್ತೆ ಚಿಂತೆಗೊಳಗಾದಳು. ಉತ್ತರಕೊಡದೆ ಯೋಚಿಸ ತೊಡಗಿದಳು. ಶಾಂಕಿಯ ತಾಯಿ ಅವಳ ಮನಸ್ಸನ್ನರಿತಳು. "ಮಗಳೇ, ಚಿಂತಿಸಬೇಡ. ಇವನೇ ಯೂಗಿ. ಇಟ್ಟ ಗುರಿಯನ್ನು ಮುಟ್ಟುವುದಕ್ಕಾಗಿಯೇ ತಾನು ಸತ್ತದ್ದಾಗಿ ಸುದ್ದಿ ಹಬ್ಬಿಸಿದ್ದಾನೆ" ಎಂದು ನಂಬಿಸಿ ನುಡಿದಳು. ಮಂತ್ರಿ ಹೇಳಿದ ನೀತಿ ರಾಣಿಯ ಮನಸ್ಸಿಗೆ ಹಿಡಿಯಿತು. ಆದರೂ ಪತಿಯ ಅಗಲಿಕೆಯನ್ನು ಸಹಿಸುವುದು ಬಹು ಕಷ್ಟವಾಗಿ ಕಂಡಿತು. ಸ್ವಲ್ಪಹೊತ್ತು ಸಂಕಟ ಪಡುತ್ತಿದ್ದು ಹೇಗೋ ಸಮಾಧಾನ ಮಾಡಿಕೊಂಡಳು. ಕಡೆಗೆ, "ಸುಳ್ಳು ಸಾವಿನಲ್ಲಿ ಬಲ್ಲಿದನಾದ ನೀತಿ ನಿಪುಣಾ ! ನಿನ್ನಿಷ್ಟದಂತೆ ಮಾಡು" ಎಂದು ತನ್ನ ಸಮ್ಮತಿಯನ್ನು ಬಾಯಿಬಿಟ್ಟು ಹೇಳಿದಳು. ಅವನ ಸ್ವಾಮಿನಿಷ್ಠೆಯನ್ನು ಪ್ರಶಂಸಿಸಿ, ನಿಶ್ಚಿಂತಳಾಗಿ ಅಲ್ಲಿಯೇ ನೆಲಸಿದಳು.

ವಾಸವದತ್ತೆಯನ್ನು ಅಗಲಿದ ಮೇಲೆ ಉದಯನನಿಗೆ ಏನು ಕೇಡೊದಗೀತೋ ಎಂದು ಯೂಗಿಗೆ ಚಿಂತೆ. ಯಾವ ಕೇಡೂ ಇಲ್ಲವೆಂದು ಗೊತ್ತಾಗುವವರೆಗೆ ತಾವು ಬಳಿಯಲ್ಲಿಯೇ ಇರಬೇಕೆಂದು ನಿಶ್ಚಯಿಸಿ ಅಲ್ಲಿಯೇ ಉಳಿದನು.

## ೩೦ ಉದಯನನ ವ್ಯಥೆ

ಉದಯನ ಕುಮಾರನು ವಾಸವದತ್ತೆ ಬಯಸಿದಂತೆ ಬಗೆಬಗೆಯ ಹೂ ತಳಿರುಗಳನ್ನು ತೆಗೆದುಕೊಂಡು ಸಡಗರದಿಂದ ಹಿಂದಿರುಗಿ ಬರುತ್ತಿದ್ದನು. ಆಗ ಎಡಗಣ್ಣು ದುರಿತು; ಬಲದೋಳು ಅಲುಗಿತು. ಈ ದುಶ್ಶಕುನಗಳಿಂದ ಆತಂಕಗೊಂಡು ಬಿರಬಿರನೆ ಬರುತ್ತಿರುವಾಗ ಎದುರಿನಲ್ಲಿ ಹೆಬ್ಬೊಗೆ ಕಾಣಿಸಿಕೊಂಡಿತು; ವಾಸವದತ್ತೆಯಿದ್ದ ಕಡೆಯೂ ಬೆಂಕಿ ಹರಡಿದ್ದಂತೆ ತೋರಿತು. ಉತ್ಸಾಹ ಕುಂದಿ ಎದೆ ನಡುಗುತ್ತಲೇ ನಗರವನ್ನು ಸಮೀಪಿಸಿದನು.

ರುಮಣ್ವಂತನೂ ವಸಂತಕನೂ ಹುಸಿಗಳ್ಳರನ್ನು ಹೊಡೆದೋಡಿಸಿ ಉದಯನನ ಬರವನ್ನೇ ಇದಿರು ನೋಡುತ್ತ ನಿಂತಿದ್ದರು. ಅರಮನೆಯ ಬಳಿ ಬಂದು ನೋಡಿದರೆ ಕಾಂಚನಮಾಲೆ ಅಳುತ್ತಿದ್ದಳು :

" ಜಂಬುದೀವವನು ಹಗೆಗಳನೋಡಿಸುತ ಕಾವ
ಸಿರಿದೊರೆಯ ಮಗಳೆ ! ಗುಂಪೋಲೆ ಮುಗುದೆಯೇ !
ನೆಲಕೆಲ್ಲ ಬೆಳಕಾಗಿ ವರದಿಂದ ಬಂದವಳೆ !
ಹೆಣ್ಗಳಿಗೆ ಬೆಳಕಾಗಿ ಮೆರೆವರುಮೆ ಮಡದಿಯೇ !
ಹೊನ್ನೇ ! ಸಿರಿಯೇ ! ತಾಯೆ ! ಚೆಲುವೇ !
ನಲ್ಲವಳೆ ! ನರುಗುಂಪು ಮಾಲೆಯುಳೆ ! ವೀಣೆಗುರೆ
ತಕ್ಕವಳೆ ! ಬೆರಗೆಸೆವ ರೂಪದಳೆ ! ಜೇನೆಣೆಯ
ನುಡಿಯುವಳೆ ! ತುಂಬು ತಿಳಿವನು ತಳೆದ ಕಿರಿಯುವಳೆ !
ಉದಯನ ಕುಮಾರನುಸಿರೂರೆಯುಹ ದೇವಿಯೇ !
ಹುದಿವ ಬೆಂಕಿಯ ಬಸಿರ ಹೊಕ್ಕೆಯಾ ! "

ಎಂದು ಬಗೆ ಬಗೆಯಲ್ಲಿ ಹಲುಬುತ್ತಿದ್ದಳು. ಕಾಡುಕಿಚ್ಚಿನ ನಡುವೆ ಸಿಕ್ಕಿ ಬಿದ್ದು ಸಂಕಟಪಡುವ ನವಿಲಿನಂತೆ ಹೊರಳಿ ಹೊರಳಿ ಅಳುವ ಕಾಂಚನಮಾಲೆಯನ್ನು ಕಂಡು ಉದಯನ ಕಂಗೆಟ್ಟನು. ವಾಸವದತ್ತೆಗೆ ಏನೋ ಕೇಡು ತಟ್ಟಿರಬೇಕೆಂದು ನಿಶ್ಚಯಿಸಿ ಆ ನೆನವನ್ನೇ ತಾಳಲಾರದೆ ನೈಮರೆತು ಕುದುರೆಯಿಂದ ದಢಾರನೆ ಬಿದ್ದು ಬಿಟ್ಟನು.

ಗೆಳೆಯರು ಹತ್ತಿರ ಹೋಗಿ ಉಪಚಾರಮಾಡಿದರು. ಅರಿವು ಮರಳಿತು; ವಾಸವದತ್ತೆಯ ಹೆಸರೆತ್ತಿ ಕೂಗುತ್ತಲೇ ಕಣ್ತೆರೆದನು. ಯಾರೆಷ್ಟು ಬಗೆ ಹೇಳಿದರೂ ಸಮಾಧಾನದ ನುಡಿಯೊಂದೂ ಅವನ ಕಿವಿಗೆ ಹೋಗಲಿಲ್ಲ. "ನನ್ನ ಪ್ರಾಣನಾಯಕಿ ಬೆಂದಳಿದ ಈ ಬೆಂಕಿಯಲ್ಲಿ ನಾನೂ ಬೀಳುವೆನು" ಎಂದು ಮುನ್ನುಗ್ಗಿದನು. ಗೆಳೆಯರು ತಡೆದು ತಬ್ಬಿ ಹಿತ ಹೇಳಿದರು : "ನೀನು ಹೀಗೆಣಿಸಬಾರದು ; ಇದು ದೊಡ್ಡ ತಪ್ಪು. ಇದರಿಂದ ನಿನ್ನ ಹಗೆಗಳು ಮಾತ್ರ ಹಿಗ್ಗುತ್ತಾರೆ. ಅರಿವಿಲ್ಲದವರು 'ಯೂಗಿಯಿಲ್ಲದೆ ಹೋದರೆ ಉದಯನನು ಏನೂ ಮಾಡಲಾರ' ಎಂದು ಆಡುತ್ತಿದ್ದಾರೆ. ಈ ನುಡಿ ನಮ್ಮನ್ನು ಸುಡುತ್ತಿದೆ. ಸಮಾಧಾನ ತಂದುಕೋ. ನೀತಿಯರಿತು ನಡೆದು ನಿನ್ನ ಕುಲವನ್ನು ಉದ್ಧಾರ ಮಾಡು" ಎಂದು ಬೇಡಿದರು.

ಕ್ಷೋಭೆಗೊಂಡರೂ ಕಡಲು ಕರೆ ಮೀರದು; ಅದರಂತೆ ಉದಯನನು ಗೆಳೆಯರ ಮಾತು ಮೀರದೆ ದೂರ ಸರಿದು ನಿಂತನು. ಉಕ್ಕುವ ದುಃಖ ವನ್ನದಮುತ್ತ, "ನನ್ನ ಜೀವಧಾರೆಯ ಒಡಲನ್ನು ನೋಡಬೇಕು ತೋರಿಸಿ" ಎಂದು ಕೇಳಿಕೊಂಡನು."ಅರಸರು ಹೆಣವನ್ನು ನೋಡುವುದು ಪದ್ಧತಿಯಲ್ಲ" ಎಂದು ಒತ್ತಿ ಒತ್ತಿ ನುಡಿದು ತಡೆದರು. ಉದಯನನು ಸುಮ್ಮನಾಗಲಿಲ್ಲ, ನೋಡಲೇಬೇಕೆಂದು ಹಟ ಹಿಡಿದನು. ತೋರಿಸದಿದ್ದರೆ ಸಂಶಯವುಂಟಾ ಗುವುದೆಂದೂ, ವಾಸವದತ್ತೆ ಸತ್ತಿಲ್ಲವೆಂದು ಅವನು ನಂಬಿದರೆ ತಮ್ಮೆಣಿಕೆಗೆ ಅಡ್ಡಿಯಾಗುವುದೆಂದೂ ಭಾವಿಸಿ ವಸಂತಕ ರುಮಣ್ವಂತರು ಆ ಹೆಣವನ್ನು ತೋರಿಸಲೊಪ್ಪಿದರು.

ಬೆಂಕಿಯನ್ನಾರಿಸಿ ಸುರಂಗ ಮಾರ್ಗ ಕಾಣದಂತೆ ಚೆನ್ನಾಗಿ ಮುಚ್ಚಿ ಮರೆಮಾಡಿ ಸೆಜ್ಜೆಮನೆಗೆ ಅರಸನನ್ನು ಕರೆದುಕೊಂಡು ಹೋದರು. ಉರಿದು ಕರಿಕಾಗಿ ಬಿದ್ದಿದ್ದ ಎರಡು ಹೆಣಗಳನ್ನೂ ಸುತ್ತಾ ಚೆದರಿ ಚೆಲ್ಲಾಡಿದ್ದ ವಾಸ ವದತ್ತೆಯ ಆಭರಣಗಳನ್ನೂ ನೋಡಿ ಶಾಂಕಿಯ ತಾಯಿ ವಾಸವದತ್ತೆಯ ರಿಬ್ಬರೂ ಸತ್ತದ್ದು ನಿಶ್ಚಯವೆಂದು ನಂಬಿಕೆಯಾಯಿತು. ಆ ಒಡವೆಗಳಲ್ಲಿ ಒಂದೊಂದನ್ನೂ ಎತ್ತೆತ್ತಿ ನೋಡಿ ನೋಡಿ ಹಲವು ರೀತಿಯಲ್ಲಿ ಹಲುಬಿ ಗೋಳಾಡಿದನು.

ಉದಯನನು ಚಿಂತೆಯಲ್ಲಿ ಮುಳುಗಿ ಸೊರಗಿರುವ ಈ ಸಮಯದಲ್ಲಿ

ಆರುಣಿ ಕದನಕ್ಕೆ ಬಂದರೆ ಎದುರಿಸಲೆಂದು ಪಡೆಗಳನ್ನು ಸಜ್ಜುಗೊಳಿಸಿದರು
ಯುದ್ಧ ಸಾಧನಗಳನ್ನೂ ಆಹಾರ ಸಾಮಗ್ರಿಗಳನ್ನೂ ಅಲ್ಲಲ್ಲೇ ಸಂಗ್ರಹಿಸಿಟ್ಟ
ನಾಡಿಗೂ ನಗರಕ್ಕೂ ತಕ್ಕ ಕಾಪು ನೇಮಿಸಿದರು. ಇದನ್ನೆಲ್ಲ ದೊರೆಗೆ ಅರಿ
ಮಾಡಿ ಅವನ ಉತ್ಸಾಹವನ್ನು ಪುಟಗೊಳಿಸುತ್ತಿದ್ದರು. ಇದಲ್ಲದೆ ಶತ್ರುವರ
ನೆನೆದು ಗೋಳಾಡುತ್ತ ಮೈಮರೆತಿರುವುದರಿಂದಾಗುವ ಕೇಡುಗಳನ್ನು ಆಗಾ
ಎತ್ತಿ ಹೇಳುತ್ತ ಅವನ ಕೊರಗನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದ್ದರು
ವಸಂತಕ ರುಮಣ್ವಂತರ ಈ ರೀತಿಯ ಸತತ ಪ್ರಯತ್ನಗಳಿಂದ ಉದಯನ
ಮನಸ್ಸು ಸಮಾಧಾನ ಸ್ಥಿತಿಗೆ ಬರುತ್ತಿತ್ತು.

ಇದನ್ನರಿತು ಯೂಗಿ, "ಅರಸನಿಗೆ ಯಾವ ಕೆಡಕೂ ಇಲ್ಲ. ಇನ
ಬೇರೆ ಕಡೆಗೆ ಹೋಗುವುದು ಮೇಲು" ಎಂದು ವಾಸವದತ್ತೆಗೆ ತಿಳಿಸಿದನು
ಮಂತ್ರಕ್ಕೆ ಕಟ್ಟುಬಿದ್ದ ನಾಗಕನ್ನಿಕೆಯಂತೆ ಆಕೆ ಮಂತ್ರಿಯ ನೀತಿ ವಚನಕ
ಕಟ್ಟುಬಿದ್ದು, ತನ್ನ ಕೊರತೆಯನ್ನು ಗಣಿಸದೆ ತನ್ನ ನಾಯಕನ ಏಳಿಗೆಯನ್ನೆ
ಗಮನಿಸಿ, ಯೂಗಿ ಹೇಳಿದಂತೆಯೇ ನಡೆಯಲು ಸಿದ್ಧಳಾದಳು. ಯೂಗಿ
ಶಾಂಕಿಯ ತಾಯಿ, ವಾಸವದತ್ತೆ—ಈ ಮೂವರೂ ರೂಪ ಮರೆಸಿಕೊಂಡ
ಬ್ರಾಹ್ಮಣ ವೇಷ ಧರಿಸಿ ಅಲ್ಲಿಂದ ಹೊರಟು, ರುಮಣ್ವಂತನ ತಂದೆ ಮು
ಯಾಗಿ, ತಪಸ್ಸು ಮಾಡುತ್ತಿದ್ದ ಒಂದು ಆಶ್ರಮಕ್ಕೆ ಹೋಗಿ ಸೇರಿದರು
ವಾಸವದತ್ತೆಯ ಸಾವಿನ ಸಮಾಚಾರವನ್ನು ಕೇಳಿ ದುಃಖದಲ್ಲಿ ಮುಳುಗಿದ
ಕಾಂಚನಮಾಲೆಗೆ ರುಮಣ್ವಂತನು ಗುಟ್ಟಾಗಿ ನಿಜಸ್ಥಿತಿಯನ್ನು ತಿಳಿಸಿ
ಅವಳನ್ನು ವಾಸವದತ್ತೆಯ ಬಳಿ ಕರೆತಂದು ಬಿಟ್ಟನು. ಬಳಿಕ ನಾಲ್ವರು
ವೇಷಾಂತರದಿಂದ ಪ್ರಯಾಣ ಮಾಡಿ ಕಾಲಕ್ರಮದಲ್ಲಿ ಚಂಪಾನಗರಿಯನ
ಸೇರಿದರು. ಅಲ್ಲಿ ಯೂಗಿಯ ಮಿತ್ರನಾದ ಮಿತ್ರಕಾಮನೆಂಬ ವರ್ತ
ಶ್ರೇಷ್ಠನ ಮನೆಯಲ್ಲಿ ತಂಗಿದರು.

## ೩೧ ಮಗಧಕ್ಕೆ ಪ್ರಯಾಣ

ವಾಸವದತ್ತೆಯನ್ನು ಕಳೆದುಕೊಂಡು ಉದಯನನು ಸೋತು ಮ
ಗಾಗಿರುವುದನ್ನು ಆರುಣಿ ಅರಿತನು. ಇನ್ನು ತಮಗೇನೂ ಕೇಡಿಲ್ಲವೆಂದ

ಸೊಕ್ಕಿ ಕೌಶಾಂಬಿಯ ರಕ್ಷಣೆಗೆ ಹೆಚ್ಚು ಗಮನ ಕೊಡದೆ ಆನಂದದಿಂದಿದ್ದು ಬಿಟ್ಟನು. ಈ ಸಂದರ್ಭವನ್ನು ಬೇಹಿನವರಿಂದ ತಿಳಿದು ರುಮಣ್ವಂತನು ಮಗಧರಾಜನ ಸ್ನೇಹವನ್ನು ಗಳಿಸಿ ಅವನ ಸಹಾಯದಿಂದ ಆರುಣಿಯನ್ನೋಡಿಸಬೇಕೆಂದು ಉದಯನನಿಗೆ ಸಲಹೆ ಮಾಡಿದನು. "ಯೂಗಿಯೂ ವಾಸವದತ್ತೆಯೂ ಇಲ್ಲವಾದ ಮೇಲೆ ನನಗೆ ಬೇಕಾದ್ದು ಇನ್ನೇನಿದೆ ?" ಎಂದು ಉದಯನ ಆ ಸಲಹೆಯನ್ನು ನಿರಾಕರಿಸಿದನು. ದಿನದಿನಕ್ಕೆ ಅವನ ವೈಸೊರಗುತ್ತಾ ಬಂತು.

ಇಶೈಜ್ಞನೆಂಬೊಬ್ಬ ಬ್ರಾಹ್ಮಣ ಮಿತ್ರನು ಒಂದು ಉಪಾಯ ಹೂಡಿದನು. "ಮಂತ್ರಶಕ್ತಿಯಿಂದ ಸಾಧಿಸಲಾಗದ್ದು ಒಂದೂ ಇಲ್ಲ. ವಾಸವದತ್ತೆ ಸತ್ತು ಬೇರೆ ಜನ್ಮ ಎತ್ತಿದ್ದರೂ ಮೊದಲ ರೂಪಿನಿಂದಲೇ ಕರೆತರಬಲ್ಲ ಮಂತ್ರವೊಂದುಂಟು. ಅದನ್ನು ಬಲ್ಲ ಒಬ್ಬ ಬ್ರಾಹ್ಮಣ ರಾಜಗೃಹದ ಬಳಿ ಇದ್ದಾನೆ." ಎಂದು ಉದಯನನ ಹತ್ತಿರ ಹೇಳಿದನು. ಆ ಸುದ್ದಿ ಉದಯನನನ್ನು ಕುತೂಹಲಗೊಳಿಸಿತು. "ಆ ಬ್ರಾಹ್ಮಣನನ್ನು ಸೇವಿಸಿದರೆ ಅವನ ಹರಕೆಯಿಂದ ವಾಸವದತ್ತೆ ದೊರೆತರೂ ದೊರೆಯಬಹುದ." ಎಂದು ಮಾತು ಕೂಡಿಸಿದನು. "ಇವೊತ್ತೇ ಅಲ್ಲಿಗೆ ಹೊರಟುಬಿಡೋಣ" ಎಂದು ಸಿದ್ಧನಾದನು.

ಪರಾಕ್ರಮದಲ್ಲಿಯೂ ತಿಳಿವಳಿಕೆಯಲ್ಲಿಯೂ ಮಿಗಿಲೆನಿಸಿದ ನೂರು ಮಂದಿ ವೀರರನ್ನು ಅರಸನ ಮೈಗಾವಲಿಗೆಂದು ರುಮಣ್ವಂತನು ಆಯ್ದು ಕರೆಸಿದನು. ಬೇರೆ ಬೇರೆ ವೇಷ ಧರಿಸಿ, ಸದಾ ಉದಯನನ ನೆರವಿಗೊದಗುತ್ತ ಎಚ್ಚರಿಕೆಯಿಂದಿರಬೇಕೆಂದು ತಿಳಿಸಿ ಬೇರೆ ಬೇರೆಯಾಗಿ ಅವರನ್ನು ಕಳಿಸಿಕೊಟ್ಟನು. ಆಮೇಲೆ ಅರಸನೂ ಗೆಳೆಯರೂ ಬ್ರಾಹ್ಮಣ ವೇಷ ತಾಳಿ ಯಾತ್ರಿಕರಂತೆ ಪ್ರಯಾಣ ಮಾಡಿದರು.

ಹಲವು ಕಾಡುಗಳನ್ನೂ ನಾಡುಗಳನ್ನೂ ದಾಟಿ ನಡೆದರು. ಕಾಡುಗಳಲ್ಲಿ ಗಂಡು ಜಿಂಕೆ ಕಾಪು ಕಾಯುತ್ತಿರಲು ಹೆಣ್ಣು ಜಿಂಕೆ ಇವರನ್ನು ನೋಡುತ್ತಾ ಬೆರಗಾಗಿ ನಿಲ್ಲುತ್ತಿತ್ತು. ಇದನ್ನು ಕಂಡ ಉದಯನನು ವಾಸವದತ್ತೆಯನ್ನು ನೆನೆದು ಹಲುಬುವನು. ಸುಂದರ ವಸ್ತು ಯಾವುದು ಕಣ್ಣಿಗೆ ಬಿದ್ದರೂ ತಟ್ಟನೆ ಅವಳ ನೆನಪಾಗಿ ಕೊರಗುವನು. ಹೀಗೆಯೇ

ಪ್ರಯಾಣ ಮಾಡುತ್ತ ಕಾಲಕ್ರಮದಲ್ಲಿ ರಾಜಗೃಹವನ್ನು ತಲುಪಿದರು. ಆ
ನಗರದ ಹೊರವಳಯದಲ್ಲಿ ಒಂದು ಕಾಮನ ಗುಡಿ; ಅದರ ಪಕ್ಕದಲ್ಲಿ
ಒಂದು ಕೊಳ: ಅದರ ಕರೆಯಲ್ಲಿ ಒಂದು ತೋಪು; ಆ ತೋಪಿನಲ್ಲಿದ್ದ
ಒಂದು ಮಂಟಪದಲ್ಲಿ ಇವರು ತಂಗಿದರು.

ವಸಂತಕನೂ ರುಮಣ್ವಂತನೂ ಕಾಕತುಂಡರೆಂಬ ಜ್ಞಾನಿಯೊಬ್ಬರನ್ನು ಅರಸನ ಬಳಿ ಕರೆತಂದರು. "ಇವರೇ ನಾವು ಹೇಳಿದ ಹಿರಿಯರು" ಎಂದು ಉದಯನನಿಗೆ ಕಾಣಿಸಿದರು. ಅವರ ಮುಖದ ಕಳೆಯನ್ನು ಕಂಡು ಅವನಿಗೆ ನೆಚ್ಚು ಮೂಡಿತು. ಮಣಿದು ಕೈಮುಗಿದು ತನ್ನ ಕೊರತೆಯನ್ನು ಅರಿಕೆ ಮಾಡಿಕೊಂಡನು. ಅವರು ಒಳ್ಳೆಯ ಮಾತನಾಡಿ ನಂಬಿಕೆ ಹುಟ್ಟಿಸಿ, "ಎರಡು ತಿಂಗಳು ವ್ರತಮಾಡಿಕೊಂಡು ನೀವು ಇಲ್ಲೇ ಇರಬೇಕು. ಆಮೇಲೆ ನಾವು ಸುಡುಗಾಡಿನಲ್ಲಿ ಒಂದು ಸಾಧನೆ ಮಾಡಬೇಕಾಗುತ್ತದೆ. ಅದು ಮುಗಿದಮೇಲೆ ವಾಸವದತ್ತೆ ಮೊದಲಿನ ರೂಪದಿಂದಲೇ ಬರುವುದು ನಿಶ್ಚಯ. ನಿಮ್ಮ ರಾಜ್ಯವೂ ಕೈಗೆ ಬರುತ್ತದೆ" ಎಂದರು. ವ್ರತವನ್ನು ಉಪದೇಶಿಸಿ ತಮ್ಮೆಡೆಗೆ ಹೊರಟು ಹೋದರು. ರುಮಣ್ವಂತನ ಇಷ್ಟಕ್ಕನುಸಾರವಾಗಿ ಅವರಾಡಿದರೆಂಬುದು ಅರಸನಿಗೆ ತಿಳಿಯದು.

"ನೆಲದೊಳಗೆ ಪ್ರವೇಶಿಸುವುದು, ಆಕಾಶದಲ್ಲಿ ಹಾರುವುದು ಮೊದಲಾದ ಅದ್ಭುತ ವಿದ್ಯೆಗಳನ್ನು ಬಲ್ಲವರನ್ನು ಕಂಡಿದ್ದೇನೆ. ಆದರೆ, ಸತ್ತವರನ್ನು ಬದುಕಿಸುವ ವಿದ್ಯೆ ತಿಳಿದವರನ್ನು ಇದುವರೆಗೆ ಕಾಣುವುದಿರಲಿ ಕೇಳಿಯೂ ಇರಲಿಲ್ಲ. ನಾವು ಪುಣ್ಯವಂತರಾದ್ದರಿಂದ ಇವರನ್ನು ಕಂಡೆವು" ಎಂದು ವಿಸ್ಮಯಪಟ್ಟು ನುಡಿಯುತ್ತಾ ಗೆಳೆಯರು ಉದಯನನ ಮನಸ್ಸಿಗೆ ಸಮಾಧಾನವುಂಟುಮಾಡುತ್ತಿದ್ದರು. ಮಗಧರಾಜರೊಡನೆ ತಮ್ಮರಸನಿಗೆ ಹೇಗಾದರೂ ಸ್ನೇಹ ಮಾಡಿಸಬೇಕೆಂದು ಅವರ ಉದ್ದೇಶ. ಅದಕ್ಕಾಗಿ ಕಾರ್ಯಮಾಡತೊಡಗಿದರು.

## ೩೨ ಕಾಮನ ಹಬ್ಬ

ಆಗ ಆ ನಗರದಲ್ಲಿ ಕಾಮದೇವನಿಗೆ ಉತ್ಸವ ಮೊದಲಾಯಿತು. ಉತ್ಸವಕ್ಕಾಗಿ ಊರನ್ನೆಲ್ಲ ಅಲಂಕಾರ ಮಾಡಿದರು. ರಾಜಪುತ್ರಿ ಪದ್ಮಾವ

ಮಿಂದು ಅಲಂಕಾರ ಮಾಡಿಕೊಂಡು ಬಂಡಿಯೇರಿ ಕಾಮನ ಗುಡಿಗೆ ಬಂದಳು.

ಗುಡಿಯ ಬಾಗಿಲಿನಲ್ಲಿ ಬಂಡಿ ನಿಂತಾಗ ಮುಚ್ಚಿದ್ದ ತೆರೆ ಗಾಳಿಗೆ ಹಾರಿತು. ಆಗ ಒಳಗಿದ್ದ ಪದ್ಮಾವತಿಯನ್ನು ಎದುರಿಗೆ ಹೊನ್ನೆ ಮರದ ಕೆಳಗೆ ವಾಸವದತ್ತೆಯನ್ನೇ ನೆನೆಯುತ್ತ ನಿಂತಿದ್ದ ಉದಯನನು ಕಂಡನು. ಪದ್ಮಾವತಿಯೂ ಅವನನ್ನು ಕಂಡಳು. ಇಬ್ಬರ ಮನಸ್ಸೂ ಕೂಡಿತು. "ನಾನು ಬಂದು ಸೇವಿಸಿದ ಹಿರಿಯರು ವಾಸವದತ್ತೆಯನ್ನು ಬದುಕಿಸಿಕೊಟ್ಟರೇನೋ!" ಎಂದು ಉದಯನೆಣಿಸಿದನು. "ನಾನು ಸೇವಿಸಬಂದ ಕಾಮದೇವ ಬ್ರಾಹ್ಮಣ ರೂಪದಿಂದ ಪ್ರತ್ಯಕ್ಷವಾದನೇನೋ !" ಎಂದು ಪದ್ಮಾವತಿ ಭಾವಿಸಿದಳು. ಬಳಿಕ ಬಂಡಿಯಿಳಿದು ಗುಡಿಗೆ ಹೋಗಿ ಕ್ರಮವಾಗಿ ಪೂಜಿಸಿ ನೋಂಪಿನಲ್ಲಿ ತೊಡಗಿದಳು.

"ದಾನಕ್ಕೆ ಬರುವ ಬ್ರಾಹ್ಮಣರನ್ನು ತಡೆಯದೆ ಒಳಗೆ ಬಿಡತಕ್ಕದ್ದು" ಎಂದು ಪದ್ಮಾವತಿ ಅಪ್ಪಣೆ ಮಾಡಿದಳು. ದೇವಸ್ಥಾನದಲ್ಲಿ ಒಬ್ಬ ಮುದುಕಿ "ಸರ್ವ ಗುಣ ಸಂಪನ್ನನಾದ ಉದಯನನಂಥ ನಾಯಕನನ್ನು ಇವಳು ಪಡೆಯಲಿ" ಎಂಬರ್ಥದ ಒಂದು ಹಾಡನ್ನು ಹಾಡಿದಳು. ಕೇಳಿದ ಪದ್ಮೆ, "ಇವೊತ್ತು ಹೊನ್ನೆಮರದ ಕೆಳಗೆ ನಿಂತಿದ್ದವನು ಅಂಥವನೇ" ಎಂದು ಕೊಂಡಳು. ದಾನಕೊಟ್ಟು ಬಂಡಿಯೇರಿ ಅರಮನೆಗೆ ಹಿಂದಿರುಗಿದಳು.

ಗೆಳತಿಯರು, "ಈ ಹಬ್ಬ ಮುಗಿಯುವವರೆಗೂ ಇವಳು ದಾನಮಾಡು ತ್ತಾಳೆ. ತೆಗೆದುಕೊಳ್ಳಬರುವವರನ್ನು ತಡೆಯಬೇಡಿ" ಎಂದು ಕಾವಲಾಳು ಗಳಿಗೆ ಹೇಳಿದರು. ಮತ್ತೆ ಅವಳನ್ನು ನೋಡಬಹುದೆಂದು ಉದಯನನು ಸಮಾಧಾನ ಮಾಡಿಕೊಂಡನು. ಎಲ್ಲರಿಗಿಂತ ಹಿಂದೆ ಹೋಗುತ್ತಿದ್ದ ಐರಾವತಿ ಯೆಂಬ ಗೆಳತಿಯೊಬ್ಬಳ ಬಳಿ ಹೋಗಿ, "ಇವಳು ಯಾರು ? ಇಲ್ಲೇಕೆ ಬಂದಳು ?" ಎಂದು ಕೇಳಿದನು. ಇವನು ಹಣದಾಸೆಗೆ ಬಂದ ಬ್ರಾಹ್ಮಣ ನಿರಬಹುದೆಂದು ಭಾವಿಸಿ ಆಕೆ ಹೀಗೆ ಉತ್ತರ ಕೊಟ್ಟಳು : "ಇವಳು ಈ ನಗರದ ದೊರೆಯ ಮಗಳು. ಪದ್ಮಾವತಿಯೆಂದು ಹೆಸರು ; ಇನ್ನೂ ಮದುವೆ ಇಲ್ಲ. ಈ ಹಬ್ಬದಲ್ಲಿ ಕಾಮನನ್ನು ಪೂಜಿಸಿ ವೈದಿಕರಿಗೆ ದಾನಮಾಡಲು ಇಲ್ಲಿ ಬಂದಳು. ಹಣದಾಸೆಯಿದ್ದರೆ ನೀವು ಇಲ್ಲೇ ಇರಿ" ಇಷ್ಟು ಹೇಳಿ, "ನಿಮ್ಮ

ನಾಡು ಯಾವುದು ? ಊರು ಯಾವುದು ? ಹೆಸರೇನು ?" ಎಂದು ಕೇಳಿದಳು. "ನಮ್ಮ ನಾಡು ಗಾಂಧಾರ ; ಊರು ರತ್ನಪುರ ; ನನ್ನನ್ನು ಮಾಣಕನೆನ್ನುತ್ತಾರೆ" ಎಂದು ಉದಯನು ಮರುನುಡಿದನು. ಬಳಿಕ ಇಬ್ಬರೂ ತಮ್ಮ ತಮ್ಮ ಎಡೆಗಳಿಗೆ ಹೊರಟುಹೋದರು.

ಪದ್ಮಾವತಿಯ ಚೆಲುವು ಉದಯನನ ಮನಸ್ಸನ್ನೆಲ್ಲ ಆವರಿಸಿ ವಾಸವದತ್ತೆಯನ್ನೂ ಮರೆಸಿತು. ಹೇಗಾದರೂ ಅವಳನ್ನು ಪಡೆಯಬೇಕೆಂದು ನಿಶ್ಚಯಿಸಿ ಗೆಳೆಯರಿಗೆ ತನ್ನ ಅಭಿಪ್ರಾಯವನ್ನು ತಿಳಿಸಿ ವ್ಯಥೆಪಟ್ಟನು. ಇತ್ತ ಪದ್ಮಾವತಿಗೂ ಹಾಗೆಯೇ ಆಯಿತು. ಅವಳೂ ತಾನು ಕಂಡ ಚೆಲುವನನ್ನೇ ನೆನೆಯುತ್ತಿದ್ದಳು.

ಮರುದಿನ ಪದ್ಮಾವತಿ ಕಾಮನ ದೇವಸ್ಥಾನಕ್ಕೆ ಬಂದಾಗ ಹಿಂದಿನಂತೆಯೇ ಉದಯನನು ಹೊನ್ನೆ ಮರದ ಕೆಳಗೆ ನಿಂತಿದ್ದನು. ಒಬ್ಬರನ್ನೊಬ್ಬರು ನೋಡಿ ಸಂತೋಷಪಟ್ಟರು. ಹೀಗೆ ದಿನದಿನವೂ ನಡೆಯುತ್ತಿತ್ತು.

ಕೆಲವು ದಿನ ಕಳೆದ ಮೇಲೆ ಒಂದು ದಿನ ಪದ್ಮಾವತಿ ತನ್ನ ಬಯಕೆಯನ್ನು ಹೊರಪಡಿಸಬಯಸಿದಳು. ಐರಾವತಿಯ ಕತ್ತಿನಲ್ಲಿ ಕೈಹಾಕಿಕೊಂಡು ಮಂಟಪದ ಮೇಲೆ ಹತ್ತಿ ನಿಂತಳು. ಉದಯನನೂ ವಸಂತಕನ ತೋಳ ಮೇಲೆ ಒಂದು ಕೈ ಹಾಕಿ ಮತ್ತೊಂದರಲ್ಲಿ ಒಂದು ಹೂವಿನ ಚೆಂಡನ್ನು ಉರುಳಿಸುತ್ತ ನಿಂತನು. ಅದನ್ನು ಕಂಡ ಪದ್ಮಾವತಿ ಐರಾವತಿಯನ್ನು ಕುರಿತು, "ಅಲ್ಲಿ ನಿಂತಿರುವವನು ಯಾರು ? ಬಲ್ಲೆಯಾ ?" ಎಂದು ಕೇಳಿದಳು. ಅವಳು "ಒಂದು ದಿನ ವಿಚಾರಿಸಿದ್ದೆ. ಅವನೊಬ್ಬ ಬ್ರಾಹ್ಮಣ. ಹೆಸರು ಮಾಣಕನಂತೆ. ಅವನೂ ಅವನ ಗೆಳೆಯರೂ ಈ ನಾಡು ನೋಡುವುದಕ್ಕೆ ಬಂದಿದ್ದಾರೆ. ನಿನ್ನ ದಾನವನ್ನು ಬಯಸಿಯೇ ಇಲ್ಲಿ ನಿಂತರೆಂದು ಕಾಣುತ್ತದೆ" ಎಂದಳು.

"ಬೇರೆಯವರಿಗೆ ಗೊತ್ತಾಗದ ಹಾಗೆ ಸನ್ನೆ ಮಾಡಿ ಆ ಚೆಂಡನ್ನು ತರುವುದಕ್ಕಾಗುತ್ತದೆಯೇ ?" ಎಂದು ಕೇಳಿದಳು ಪದ್ಮಾವತಿ. ಐರಾವತಿ ಕೈತಟ್ಟಿ ಉದಯನನ ಗಮನ ಸೆಳೆದು, "ನಿನ್ನ ಕೈಯಲ್ಲಿರುವ ಚೆಂಡನ್ನು ಇವಳಿಗೆ ಕೊಡು" ಎಂದು ಕೈಯಿಂದಲೂ ಕಣ್ಣಿನಿಂದಲೂ ಸನ್ನೆ ಮಾಡಿ ತಿಳಿಸಿದಳು. ಅದನ್ನರಿತು ಉದಯನನು ತನ್ನ ಗೆಳೆಯರಿಗೆ ಸಂಗತಿಯನ್ನು ತಿಳಿಸಿದನು. "ಇವಳು ನನ್ನ ಮನಸ್ಸನ್ನು ತನ್ನೆಡೆಗೆ ಸೆಳೆದಿದ್ದಾಳೆ ; ತಾನೂ

ನನ್ನನ್ನು ಪ್ರೀತಿಸುತ್ತಾಳೆ" ಎಂದನು. ಗೆಳೆಯರಲ್ಲಿ ಇಶೈಚ್ಚನು, "ಈ ನಾಡ ಹೆಂಗಸರು ಚಿತ್ತಸ್ಥೈರ್ಯವುಳ್ಳವರು. ಪದ್ಮಾವತಿಯೂ ಅಂಥವಳೇ. ಒಂದು ವೇಳೆ, ಹೆಂಡತಿ ಬೆಂಕಿಬಿದ್ದು ಸತ್ತಮೇಲೆ ಉದಯನನು ಬ್ರಾಹ್ಮಣವೇಷ ದಿಂದ ಇತ್ತ ಬಂದನೆಂದು ಹೇಗೋ ಸುದ್ದಿ ತಿಳಿದು ತನ್ನ ಪ್ರೀತಿಯನ್ನು ಸೂಚಿಸಿರಬಹುದು. ಅಥವಾ, ಇಂಥ ಗಾಂಭೀರ್ಯವುಳ್ಳವರು ಬಂದು ದಾನ ಕೇಳುವುದು ತಕ್ಕದ್ದಲ್ಲವೆಂಬ ಒಳ್ಳೆಯ ಅಭಿಪ್ರಾಯದಿಂದಲೇ ನಮ್ಮ ಕಡೆ ನೋಡಿರಬಹುದು ಹೇಗೇ ಆದರೂ ಅವಳ ಕಡೆ ಮನಸ್ಸು ಹರಿಯಬಿಡ ಬಾರದು" ಎಂದನು. ಉಳಿದವರೂ ಅದನ್ನೇ ಅನುಮೋದಿಸಿದರು.

ತಮ್ಮ ಪರಸ್ಪರ ಪ್ರೀತಿಯನ್ನು ಅರಿಯದ ಗೆಳೆಯರಿಗೆ ನಿದರ್ಶನಕೊಟ್ಟು ಒಪ್ಪಿಸಬೇಕೆಂದು ಹೀಗೆ ಹೇಳಿದನು : "ನಾನು ಹೂಮಾಲೆ ಕಟ್ಟಿ ಅವಳು ಕಾಣುವಂತೆ ಅದನ್ನು ಮರದ ಕೊಂಬೆಗೆ ನೇತುಹಾಕುತ್ತೇನೆ. ಆ ಮೇಲೆ ನಾವು ಮರೆಯಾಗಿರೋಣ. ಅವಳು ಬಂದು ಆ ಮಾಲೆಯನ್ನು ತೆಗೆದು ಕೊಂಡರೆ ನನ್ನ ಮಾತು ನಿಜವೆಂದು ನಂಬಿರಿ"ಎಂದನು. ಅವರೂ ಒಪ್ಪಿದರು. ಉದಯನನು ಅತ್ತಿತ್ತ ತಿರುಗಿ ಹೂಕೊಯ್ದು ಮಾಲೆ ಕಟ್ಟಿದನು. ತಾವು ಒಬ್ಬರನ್ನೊಬ್ಬರು ಕಂಡಾಗಿನಿಂದ ನಡೆದ ಸಂಗತಿಗಳನ್ನು ವ್ಯಕ್ತಪಡಿಸುವ ಕೆಲವು ಚಿತ್ರಗಳನ್ನು ಬಾಳೆ ಸುಳಿಯಲ್ಲಿ ಉಗುರಿನಿಂದ ಗೀರಿ ಬರೆದನು. ಹೂ ಮಾಲೆಯನ್ನೂ ಚಿತ್ರಮಾಲೆಯನ್ನೂ ಮರದ ಕೊಂಬೆಗೆ ತೂಗಬಿಟ್ಟು, ತಾನು ಪಕ್ಕಕ್ಕೆ ಸರಿದು ಹೋದನು.

ಪದ್ಮಾವತಿ ಗೆಳತಿಯರೊಡನೆ ಕೊಳಕ್ಕೆ ಬಂದು ಮಿಂದು ಅಲಂಕರಿಸಿ ಕೊಂಡು ತೋಪಿನ ಕಡೆ ನೋಡಿ ಒಬ್ಬಳೇ ಮೆಲ್ಲನೆ ಅಲ್ಲಿ ಹೋದಳು. ಮರ ಕೊಂಬೆಯಲ್ಲಿ ತೂಗುತ್ತಿದ್ದ ಮಾಲೆಗಳನ್ನು ಕಂಡು ನಸುನಕ್ಕಳು. ಒಂದು ನೈದಿಲೆ ಹೂವನ್ನು ಕೈಯಲ್ಲಿ ಹಿಡಿದು ಅದರ ದಂಟಿನಲ್ಲಿ ತನ್ನ ಹೆಸರು ಕೆತ್ತಿದ ಉಂಗುರವನ್ನು ಅಡಗಿಸಿಟ್ಟಳು. ಆಮೇಲೆ ಅದನ್ನೂ ಹೂಗಂಧಗಳನ್ನೂ ತಂದು ಉದಯನನ ಮಾಲೆಯ ಬಳಿ ಇಟ್ಟು, ಆ ಮಾಲೆಯನ್ನು ತಲೆಯಲ್ಲಿ ಮುಡಿದಳು ; ಚಿತ್ರವನ್ನು ಎದೆಗಪ್ಪಿಕೊಂಡಳು. ಆಮೇಲೆ ಹಿಂದಿರುಗಿ ಕೊಳದ ಹತ್ತಿರ ಬಂದು ಸಖಿಯರೊಡನೆ ದೇವಸ್ಥಾನಕ್ಕೆ ಹೋದಳು.

ಮರೆಯಲ್ಲಿ ನೋಡುತ್ತಿದ್ದ ರುಮಣ್ವಂತನು ಉಳಿದ ಗೆಳೆಯರಿಗೂ

ನಡೆದದ್ದನ್ನೆಲ್ಲ ತಿಳಿಸಿದನು. ವಸಂತಕನು ಹೋಗಿ ಪದ್ಮಾವತಿ ಇಟ್ಟಿದ್ದ ಹೂಗಂಧಗಳನ್ನೂ, ಮಣಿಯುಂಗುರವನ್ನೂ ತಂದುಕೊಟ್ಟನು. ಉದಯನನು ಪದ್ಮಾವತಿ ಮಿಂದ ಕೊಳದಲ್ಲಿ ಮಿಂದು, ಅವಳಿಟ್ಟಿದ್ದ ಗಂಧ ತೊಡೆದು ಕೊಂಡು, ಹೂಮಾಲೆಯನ್ನು ಮುಡಿದು, ಉಂಗುರವನ್ನು ಬೆರಳಿಗಿಟ್ಟು ಕೊಂಡು ನೈದಿಲೆಯನ್ನು ಹಿಡಿದು ಮುಖಸರಳಿ ನಿಂತನು. ಪದ್ಮಾವತಿ ದೇವ ಸ್ಥಾನದ ಮಂಟಪದ ಮೇಲಿನಿಂದ ಇದನ್ನು ನೋಡಿ ಸಂತುಷ್ಟಳಾದಳು. ಅವಳ ಪ್ರೀತಿ ತನ್ನಲ್ಲಿ ನೆಲೆಸಿರುವುದನ್ನು ಗೆಳೆಯರಿಗೆ ನಿದರ್ಶನ ಮಾಡಿಕೊಟ್ಟು ಉದಯನನೂ ನಿಶ್ಚಿಂತನಾಗಿ ನಿದ್ದೆ ಮಾಡಿದನು.

## ೩೩ ಗಾಂಧರ್ವ ವಿವಾಹ

ಕನಸಿನಲ್ಲಿ ವಾಸವದತ್ತೆ ಕಾಣಿಸಿದಳು. ಮೈ ಬಡವಾಗಿದೆ, ಧೂಳು ತುಂಬಿದೆ. ಕಂಡು ಉದಯನನು, "ಮಾಸಿರದ ಪತಿವ್ರತದ ವಾಸವದತ್ತೆ! ನನ್ನ ನೋವೆಲ್ಲ ಪರಿಹಾರವಾಗುವಂತೆ ಬಂದೆಯಾ, ಬಾ." ಎಂದು ಹಲುಬಿದನು. ಅವಳು, "ನನ್ನನ್ನು ತೊರೆದು ಬೇರೆ ದೇಶಕ್ಕೆ ಹೋದೆ. ಪ್ರೀತಿಯಿರುವವರಂತೆ ಮಾತಾಡಬೇಡ!" ಎಂದು ಮುನಿದು ನುಡಿದಳು. ಅವನು ಹತ್ತಿರ ಹೋಗಿ, "ನಿನ್ನನ್ನು ಬದುಕಿಸಿ ತರಬಲ್ಲವನೊಬ್ಬನು ಇಲ್ಲಿರುವನೆಂದು ಕೇಳಿ, ಬದುಕಿಸಿಕೊಳ್ಳಲೆಂದು ಇಷ್ಟು ದೂರ ಬಂದೆ; ಕೋಪಿಸಿಕೊಳ್ಳಬೇಡ" ಎಂದು ಅನುನಯ ಹೇಳಿದನು. "ನೀನು ಪದ್ಮಾವತಿಯಲ್ಲಿ ಪ್ರೇಮಗೊಂಡು ಅವಳಿಟ್ಟ ಗಂಧವನ್ನು ತೊಡೆದುಕೊಳ್ಳಲಿಲ್ಲವೆ? ಮಾಲೆಯನ್ನು ಮುಡಿದುಕೊಳ್ಳಲಿಲ್ಲವೆ?" ಎಂದು ಬಿರುಸಾಗಿ ನುಡಿದು ವಾಸವದತ್ತೆ ಹೊರಟೇ ಹೋದಳು. ಉತ್ತರಕೊಡಬೇಕೆಂದಿರುವಷ್ಟರಲ್ಲಿಯೇ ಎಚ್ಚರವಾಯಿತು.

ಉದಯನನು ಕನಸನ್ನು ಗೆಳೆಯರಿಗೆ ವಿವರಿಸಿದನು. ಅವರು, "ವಾಸವದತ್ತೆ ಕೋಪಗೊಂಡವಳಾದ್ದರಿಂದ ಪದ್ಮಾವತಿಯನ್ನು ಪ್ರೀತಿಸುವುದು ತಪ್ಪಾಗುತ್ತದೆ. ಆ ಪ್ರೇಮವನ್ನು ತೊರೆದು ಬಿಡು" ಎಂದು ತಿಳಿಯ ಹೇಳಿದರು. ತೊರೆಯಲಾರೆನೆಂದು ಉದಯನನು ಉತ್ತರ ಕೊಟ್ಟನು.

"ದರ್ಶಕ ರಾಜನ ಸ್ನೇಹವನ್ನು ಸಂಪಾದಿಸಬೇಕೆಂದು ಇಲ್ಲಿ ಬಂದೆವು. ದೈವವೇ ನಮಗೆ ಸಹಾಯವಾದಂತಿದೆ" ಎಂದು ಮಂತ್ರಿಗಳು ತೃಪ್ತಿಪಟ್ಟರು. "ಪದ್ಮೆ ಯೊಡನೆ ಅವಳ ಮಂದಿರಕ್ಕೆ ಹೋಗಬೇಕೆಂದಿದ್ದೇನೆ" ಎಂದು ಉದಯನು ನುಡಿದಾಗ, ಅವರಿಗೆ ಕಳವಳವಾಯಿತು. ಹಾಗೆ ಮಾಡುವುದು ತಪ್ಪೆಂದು ತಡೆದು, ಅದರಿಂದಾಗುವ ತೊಡಕುಗಳನ್ನು ವಿವರಿಸಿದರು. ಉದಯನನಿಗೆ ಆ ಮಾತು ಹಿಡಿಸಲಿಲ್ಲ. ಆದರೂ ಗೆಳೆಯರಿಗೆ ಎದುರು ಹೇಳದೆ ಸುಮ್ಮನಿದ್ದನು.

ಒಂದು ದಿನ ಉದಯನನು ಗೆಳೆಯರನ್ನು ಬಿಟ್ಟಗಲಿ ಮುದುಕನಂತೆ ವೇಷಹಾಕಿಕೊಂಡು ದಾನ ತೆಗೆದುಕೊಳ್ಳುವ ಬ್ರಾಹ್ಮಣರ ಜೊತೆಯಲ್ಲಿ ಕಾಮನ ದೇವಸ್ಥಾನಕ್ಕೆ ಹೋದನು. ಹೋಗಿ ಒಳಗಿನ ಕಲ್ಯಾಣ ಮಂಟಪ ದಲ್ಲಿ ಯಾರೂ ಅರಿಯದಂತೆ ಅಡಗಿದ್ದನು. ಅವನು ಅಲ್ಲಿರುವಾಗ ಪದ್ಮಾ ವತಿ ಪೂಜೆಗೆ ಬಂದವಳು ಒಮ್ಮೆ ಒಂಟಿಯಾಗಿ ಅಲ್ಲಿಗೆ ಬಂದಳು. ಆಗ ಉದಯನನು ತನ್ನ ನಿಜರೂಪದಿಂದ ಕಾಣಿಸಿಕೊಂಡನು. ಅವನನ್ನು ಕಂಡು ಕುಮಾರಿ ನಾಚಿ ನಿಂತಳು. ಉದಯನ ತನ್ನ ಪ್ರೀತಿಯನ್ನು ಹೇಳಿಕೊಂಡು ತನ್ನನ್ನು ಒಲಿಯಬೇಕೆಂದು ಕೇಳಿಕೊಂಡನು. ಪದ್ಮಾವತಿ ನಾಚಿ ನಿಂತರೂ ಅವಳ ಸಮ್ಮತಿ ವ್ಯಕ್ತವಾಗಿಯೇ ಇತ್ತು. ಇಬ್ಬರೂ ಪ್ರೀತಿಯಿಂದ ಮಾತ ನಾಡಿದರು. ಒಬ್ಬರಿಗೊಬ್ಬರು ಮಾಲೆ ಹಾಕಿ ಗಾಂಧರ್ವ ವಿಧಿಯಿಂದ ಮದುವೆಯಾದರು. ಬಳಿಕ ಪದ್ಮಾವತಿ ಹೊರಗೆ ಬಂದ ಗೆಳತಿಯರೊಡನೆ ವಾಹನವನ್ನೇರಿ ಅರಮನೆಗೆ ಹೋದಳು. ಉದಯನನೂ ಮುದಿ ಬ್ರಾಹ್ಮಣ ನಾಗಿ ಜನರರಿಯದಂತೆ ಹೊರಬಂದು ಗೆಳೆಯರನ್ನು ಸೇರಿಕೊಂಡನು.

ಮರುದಿನ ಬೇರೊಂದು ವೇಷ ತಳೆದು ಅರಮನೆಯ ಕಡೆ ನಡೆದನು. ಅಲ್ಲಿ ಕಾವಲುಗಾರರು,ವಿದ್ವಾಂಸರು ಮೊದಲಾದ ರಾಜಪರಿವಾರದವರೊಡನೆ ಮಾತಾಡಿ ಅರಸುಮನೆತನದ ಸುದ್ದಿ ತಿಳಿದುಕೊಳ್ಳಲು ಪ್ರಯತ್ನಿಸಿದನು. ದರ್ಶಕರಾಜನ ತಂದೆ ಅಪಾರ ನಿಧಿಯನ್ನು ಕೂಡಿಸಿದ್ದನೆಂದೂ ಅದನ್ನು ಎಲ್ಲಿ ಹೂತಿಟ್ಟಿದೆಯೆಂದು ತಿಳಿಯದೆ ದರ್ಶಕನು ಪೇಚಾಡುತ್ತಿರುವನೆಂದೂ ಗೊತ್ತಾ ಯಿತು. ಅದನ್ನರಿತು, ಉದಯನನು ರಾಜನನ್ನು ಕಾಣಬಯಸಿ, "ಹೂಳು ನಿಧಿಗಳನ್ನು ಕೀಳುವ ವಿದ್ಯೆಯಲ್ಲಿಯೂ ಕೆಳನೀರುಗಳನ್ನು ಅರಿಯುವವಿದ್ಯೆಯ ಲ್ಲಿಯೂ ನನಗೆ ಒಳ್ಳೆಯ ಪರಿಶ್ರಮವುಂಟು." ಎಂದು ಹೇಳಿ ಕಳಿಸಿದನು. ದರ್ಶಕ ಮಹಾರಾಜ ಅವನನ್ನು ಕರೆಸಿಕೊಂಡು ವಿದ್ವಾಂಸನೆಂದು ಗೌರವಿಸಿ

ಆದರಿಸಿದನು. ಅವನು ಕಲ್ತರಿತ ವಿದ್ಯೆಗಳನ್ನೆಲ್ಲ ಕೇಳಿ ತಿಳಿದು ಆನಂದಿಸಿದನು. ಕಡೆಯಲ್ಲಿ, "ನಮ್ಮ ತಂದೆ ನಿಧಿಯನ್ನು ಹೂಳಿಟ್ಟಿರುವ ಸ್ಥಳವನ್ನು ತೋರಿಸುವಿರಾ ?" ಎಂದು ಕೇಳಿದನು. ಉದಯನನು ಒಪ್ಪಿ, ತನ್ನ ವಿದ್ಯಾಬಲದಿಂದ ಪರೀಕ್ಷೆ ಮಾಡಿ ನಿಧಿಯನ್ನು ಕಂಡು ಹಿಡಿದು ತೋರಿಸಿದನು.

ಅರಸನಿಗೆ ಆಶ್ಚರ್ಯವಾಯಿತು. "ಇಂಥವರು ಸಿಕ್ಕುವುದು ಕಷ್ಟ. ಬಯಸಿದ್ದನ್ನು ಕೊಟ್ಟು ಇವರನ್ನು ನಮ್ಮೊಡನೆಯೇ ನಿಲ್ಲಿಸಿಕೊಳ್ಳಬೇಕು" ಎಂದು ನಿಶ್ಚಯಿಸಿದನು. "ಈ ಅರಮನೆಯಲ್ಲಿಯೂ ಇದರ ಅಕ್ಕಪಕ್ಕದಲ್ಲಿಯೂ ಒಳ್ಳೆಯ ನೀರಿರುವುದಾದರೆ ತೋರಿಸಬೇಕು" ಎಂದು ಕೇಳಿದನು. ಉದಯನನು ನೀರ್ನೆಲೆಯ ಲಕ್ಷಣಗಳನ್ನು ವಿವರಿಸಿ, ಸುತ್ತಮುತ್ತಣ ನೆಲವನ್ನು ಶೋಧಿಸಿ ಒಳ್ಳೆಯ ನೀರುಳ್ಳ ಎಡೆಗಳನ್ನೂ ತೋರಿಸಿದನು. ಅಗೆಯಿಸಿದಾಗ ಸೊಗಸಾದ ನೀರು ದೊರೆಯಿತು. ದರ್ಶಕನು ಸಂತೋಷಿಸಿ, ಅವನನ್ನು ಅರಮನೆಯಲ್ಲಿಯೇ ಇರುವಂತೆ ಕೇಳಿ ಒಪ್ಪಿಸಿದನು. ಉದಯನನು ಅಲ್ಲಿರುತ್ತಾ ಸಮಯವರಿತು ಕಾಮನ ಗುಡಿಗೆ ಗುಟ್ಟಾಗಿ ಹೋಗಿ ಪದ್ಮೆಯನ್ನು ನೋಡಿ ಮಾತಾಡಿ ಬರುತ್ತಿದ್ದನು. ಹಬ್ಬ ಮುಗಿದ ಮೇಲೂ ಪದ್ಮೆಯ ಗೆಳತಿಯರ ಮೂಲಕ ಒಬ್ಬರೊಬ್ಬರ ಸುದ್ದಿಯನ್ನು ಅರಿತುಕೊಳ್ಳುತ್ತಿದ್ದರು.

ಇದನ್ನರಿತು ರುಮಣ್ವಂತನೂ ರಾಜಾಸ್ಥಾನಕ್ಕೆ ಹೋಗಿ ಒಂದ. ಉದ್ಯೋಗವನ್ನು ಸಂಪಾದಿಸಿ ದೊರೆ ಮೆಚ್ಚುವಂತೆ ಕೆಲಸ ಮಾಡುತ್ತಾ ಅರಮನೆಯಲ್ಲಿ ತಂಗಿದನು. ಇಶ್ಶೈಚ್ಚನು ಪದ್ಮೆಯ ತಾಯಿಗೆ ಧರ್ಮಬೋಧೆ ಮಾಡುವ ಪುರಾಣಿಕನಾದನು. ವಸಂತಕನು ಕಂಡವರು ಬೆರಗಾಗುವಂತೆ ಮಾಲೆಕಟ್ಟುವ ಮಾಲೆಗಾರನಾಗಿ ಹೇಗೋ ಅರಮನೆಗೆ ಸೇರಿದನು. ಇತರ ವೀರರೂ ತಕ್ಕ ಕೆಲಸಗಳನ್ನು ಸಂಪಾದಿಸಿ ಸಮೀಪದಲ್ಲಿಯೇ ಬೇರೆ ಬೇರೆ ಕಡೆ ತಂಗಿದ್ದರು. ಎಲ್ಲರೂ ಉದಯನನ್ನು ಸದಾ ಎಚ್ಚರಿಕೆಯಿಂದ ಕಾದುಕೊಂಡಿರುತ್ತಿದ್ದರು.

## ೩೪ ಪದ್ಮಾವತಿಗಾಗಿ ಕಲಹ

ಹೀಗೆ ಒಂದು ತಿಂಗಳು ಕಳೆಯಿತು. ಅಷ್ಟರಲ್ಲಿ ಕೇಕೆಯ ರಾಜ್ಯದ ಅರಸನು ಪದ್ಮಾವತಿಯನ್ನು ಮದುವೆಯಾಗಬಯಸಿ ಕಾಣಿಕೆ ಕಳಿಸಿದನು.

ಆ ಮೇಲೆ ರಾಜಗೃಹಕ್ಕೆ ಪ್ರಯಾಣ ಹೊರಟು ತನ್ನ ಬರವನ್ನು ಹೇಳಿ ಕಳಿಸಿದನು. ದರ್ಶಕನು ನಗರವನ್ನಲಂಕರಿಸಿ ಪರಿವಾರದೊಡನೆ ಹೋಗಿ ಎದುರುಗೊಂಡು ಕೇಕಯರಾಜನನ್ನು ಅರಮನೆಗೆ ಕರೆತಂದನು.

ಇದರಿಂದ ಬೇರೆ ಕೆಲವು ದೊರೆಗಳಿಗೆ ಬಹಳ ಅಸಮಾಧಾನವಾಯಿತು. ಅವರೆಲ್ಲ—ವಿರಚಿಕ, ಲಿಚ್ಛವಿ, ಮಲ್ಲ, ವೈಶಾಲಿ, ಅಯೋಧ್ಯೆಯರಸ ಮೊದಲಾದವರು—ಒಟ್ಟುಗೂಡಿ ದಂಡೆತ್ತಿ ಬಂದು ರಾಜಗೃಹವನ್ನು ಮುತ್ತಿದರು. ದರ್ಶಕನು ಕಳವಳಗೊಂಡನು. ಪದ್ಮಾವತಿ, "ಈ ಸುದ್ದಿಯನ್ನು ಮಾಣಕನಿಗೆ ಹೇಳು" ಎಂದು ಐರಾವತಿಯನ್ನು ಕಳಿಸಿದಳು. ಕೇಳಿದ ಉದಯನನು "ಹೀಗೆ ಹಗೆಗಳು ಬಂದು ಮುತ್ತಿದ್ದು ನಮಗೆ ಅನುಕೂಲವೇ ಆಯಿತು" ಎಂದುಕೊಂಡು, "ಇನ್ನು ಎರಡು ತಿಂಗಳೊಳಗೆ ಪದ್ಮೆಯನ್ನು ಬಂದು ಕಾಣುತ್ತೇನೆ" ಎಂದು ಹೇಳಿ ಕಳಿಸಿದನು.

ಬಳಿಕ ಈ ಹಗೆಗಳನ್ನು ಗೆಲ್ಲುವ ಮಾರ್ಗವೇನೆಂದು ಯೋಜಿಸಿ ಗೊತ್ತುಮಾಡಿಕೊಂಡನು. ಸಂಕೇತವಾದ ರಾಗವೊಂದನ್ನು ಬಾಜಿಸಿ ಅಲ್ಲಲ್ಲಿ ಚೆದರಿದ್ದ ತನ್ನ ಗೆಳೆಯರನ್ನು ಬರಮಾಡಿಕೊಂಡನು. ಅವರಿಗೆ ತನ್ನ ಹಂಚಿಕೆಯನ್ನು ತಿಳಿಸಿ ಕೆಲವು ದಿನ ಕಾದನು. ಆ ಮೇಲೆ ವರ್ತಕ ವೇಷದಿಂದ ಹಗೆಪಡೆಯ ಕಡೆ ಹೊರಟನು.

ಅಷ್ಟರಲ್ಲಿ ವೃಷಭಕನು ಕಳಿಸಿದ್ದ ಹಲವು ಕುದುರೆಗಳು ಬಂದು ಸೇರಿದವು. ಆಗ ಉದಯನನು ಹಗೆಯ ಬೀಡನ್ನು ಹೊಕ್ಕು, "ನಾವು ಕುದುರೆ ವ್ಯಾಪಾರಿಗಳು. ಮಗಧ ರಾಜನೊಡನೆ ವ್ಯವಹಾರ ಇಟ್ಟುಕೊಂಡಿದ್ದೆವು. ಈಗ ಅವನು ನಮಗೆ ಹಗೆಯಾಗಿದ್ದಾನೆ. ಅವನನ್ನು ಅಡಗಿಸಲು ನಮಗೆ ಸಹಾಯ ಮಾಡಿ" ಎಂದು ಕೇಳಿದನು. ಅವರು ಸಂತೋಷಿಸಿ ಈ ಹುಸಿ ವರ್ತಕನನ್ನು ಪರಿವಾರದೊಡನೆ ಇಟ್ಟುಕೊಂಡರು.

ಒಂದೆರಡು ದಿನಗಳಲ್ಲಿ ಉದಯನನು ಅವರ ಗುಟ್ಟುಗಳನ್ನೆಲ್ಲ ತಿಳಿದುಕೊಂಡನು. ಅವನ ವೀರರು ಯುದ್ಧ ಸನ್ನದ್ಧರಾಗಿ ಬೇರೆ ಬೇರೆ ಗುಂಪುಗಳಾಗಿ ಒಡೆದು, ಹಗೆ ದೊರೆಗಳಲ್ಲಿ ಒಬ್ಬೊಬ್ಬನ ದಂಡಿನೊಳಗೂ ಹೋಗಿ ಸೇರಿಕೊಂಡರು. ಸರಿಯಾದ ಸಮಯವನ್ನು ಸಾಧಿಸಿ ಆ ದೊರೆಯ ಮೇಲೆ ಈ ದೊರೆ, ಈ ದೊರೆಯಮೇಲೆ ಆ ದೊರೆ ಯುದ್ಧ ಮಾಡುತ್ತಿರುವನೆಂಬ ಭ್ರಾಂತಿ

ಬರುವಂತೆ ಘೋಷಣೆಗಳನ್ನು ಕೂಗುತ್ತ ಕಲಹವನ್ನಾರಂಭಿಸಿದರು. ಹಗೆ ದೊರೆಗಳೆಲ್ಲರೂ ಆ ಅಕಸ್ಮಿಕಕ್ಕೆ ಬರಗಾಗಿ ತಮ್ಮ ತಮ್ಮಲ್ಲೇ ಹೊಡೆದಾಡ ತೊಡಗಿದರು. ಆಗ ಇದ್ದಕ್ಕಿದ್ದಂತೆಯೇ, "ವತ್ಸವನ್ ಬಾಳ್ಗೆ ! ಉದಯನನ್ ಬಾಳ್ಗೆ !" ಎಂಬ ಘೋಷವೆದ್ದಿತು. ಆ ದೊರೆಗಳೆಲ್ಲ ಅಂಜಿ ತಮ್ಮ ಆಯುಧ ಸಾಮಗ್ರಿಯನ್ನೆಲ್ಲಾ ಪಾಳೆಯದಲ್ಲಿಯೇ ಬಿಟ್ಟು ಪಲಾಯನ ಮಾಡಿದರು.

ರುಮಣ್ವಂತನು ಸಂತೋಷಿಸಿ ವಸಂತಕನನ್ನು ದರ್ಶಕನ ಬಳಿಗೆ ಕಳಿಸಿದನು. ಅವನು ನಗರವನ್ನು ಹೊಕ್ಕು ಹಗೆಗಳು ಓಡಿಹೋದ ಸುದ್ದಿಯನ್ನು ಬೀದಿ ಬೀದಿಯಲ್ಲೂ ಸಾರಿ ಹೇಳುತ್ತಲೆ ಅರಮನೆಯಕಡೆ ನಡೆದನು. "ಅರಸಿ ವಾಸವದತ್ತೆಯ ಸಾವಿನಿಂದ ನೊಂದ ಉದಯನನು ದುಃಖ ಪರಿಹಾರಕ್ಕಾಗಿ ಈ ನಾಡಿಗೆ ಬಂದನು. ಹಗೆಗಳು ನಗರವನ್ನು ಮುತ್ತಿರುವುದನ್ನು ಕಂಡು, ತಮ್ಮ ಹಿರಿಯರಿಗೆ ಮಗಧರಾಜನೊಡನೆ ಇದ್ದ ಮೈತ್ರಿಯನ್ನುನೆನೆದು, ಮಗಧದ ಶತ್ರುಗಳೊಡನೆ ಯುದ್ಧಮಾಡಿ ಅವರನ್ನೋಡಿಸಿದನು. ಈ ಗೆಲವನ್ನೇ ಕೈಸಾಣಿಕೆಯಾಗಿ ತೆಗೆದುಕೊಂಡು ತಮ್ಮನ್ನು ಕಾಣಬಂದಿದ್ದಾನೆ" ಎಂದು ದರ್ಶಕನಿಗೆ ಹೇಳಿ ಕಳಿಸಿದನು. ಅರಸನು ವಸಂತಕನನ್ನು ಕರೆಸಿಕೊಂಡು ಮತ್ತೆ ಮತ್ತೆ ಆ ಸಂಗತಿಯನ್ನು ಕೇಳಿ ಆನಂದಿಸಿದನು. ಅನಂತರ ಬಹು ಸಂಭ್ರಮದಿಂದ ಉದಯನನ್ನು ಎದುರುಗೊಂಡು ಕರೆದುಕೊಂಡು ಬಂದನು

ಇತ್ತಕಡೆ ದಿಗಿಲಿನಿಂದ ಓಡಿಹೋದ ಬಗೆದೊರೆಗಳು ನಡೆದದ್ದನ್ನು ನಿದಾನವಾಗಿ ವಿಮರ್ಶಿಸಿದರು. ಒಬ್ಬರೊಡನೊಬ್ಬರು ಕಲೆತು ಮಾತಾಡಿ ತಮ್ಮಲ್ಲಿ ಯಾರದೂ ತಪ್ಪಿಲ್ಲವೆಂದು ಕಂಡುಕೊಂಡರು. ಮತ್ತೆ ಒಟ್ಟುಗೂಡಿ ಮಗಧನನ್ನು ಮುತ್ತಿದರು. ಪಯಿರುಗಳನ್ನು ಸುಟ್ಟು ಊರುಗಳನ್ನು ಕೊಳ್ಳೆ ಹೊಡೆದು ಪ್ರಜೆಗಳನ್ನು ಪೀಡಿಸಲು ಮೊದಲು ಮಾಡಿದರು. ಸುದ್ದಿ ಅರಸನಿಗೆ ಮುಟ್ಟಿತು. ಅವನು ಕೋಪಗೊಂಡು ತಾನೇ ಯುದ್ಧಕ್ಕೆ ಹೊರಟನು. ಆಗ ಉದಯನನು, "ನಾನೇ ಹೋಗಿ ಯುದ್ಧ ಮಾಡಿ ಗೆದ್ದು ಬರತ್ತೇನೆ. ನಿಮ್ಮ ಚತುರಂಗ ಸೇನೆಯನ್ನೂ ಅದಕ್ಕೆ ನಾಯಕನಾಗಿ ಒಬ್ಬ ವೀರನನ್ನೂ ಕಳಿಸಿದರೆ ಸಾಕು" ಎಂದು ವಸಂತಕನ ಮೂಲಕ ದರ್ಶಕನಿಗೆ ಹೇಳಿ ಕಳಿಸಿದನು. ತಾನು ಹೋಗಿ ಗೆದ್ದುಬರುವುದಾಗಿ ಕೇಕಯದರಸನೂ ತಿಳಿಸಿದನು. ದರ್ಶಕ

ಮಹಾರಾಜನು ತನ್ನ ಸೈನ್ಯಕ್ಕೆ ಕೇಕಯ ರಾಜನನ್ನು ನಾಯಕನನ್ನಾಗಿ ಮಾಡಿ, ಉದಯನನ ಜೊತೆಗೂಡಿ ಹೋಗಿ ಶತ್ರುಗಳನ್ನು ಗೆದ್ದು ಬರುವಂತೆ ತಿಳಿಸಿದನು. ಇಬ್ಬರೂ ದಂಡಿನೊಡನೆ ಹೋಗಿ ಶತ್ರುಗಳ ಮೇಲೆ ಬಿದ್ದರು.

ದೊಡ್ಡ ಕಾಳಗ ನಡೆಯಿತು. ಉದಯನನು ಆನೆಯ ಮೇಲೇರಿ ಹೋರುತ್ತಿದ್ದನು. ತನ್ನಂತೆಯೇ ಆನೆಯನ್ನು ಹತ್ತಿ ಯುದ್ಧಮಾಡುತ್ತಿದ್ದ ಲಿಚ್ಛವಿಯರಸನ ತಮ್ಮನ ಮೇಲೆ ನುಗ್ಗಿ ಆ ಆನೆಯನ್ನಡಗಿಸಿ ವೀರನನ್ನು ಸೆರೆಹಿಡಿದನು. ರುಮಣ್ವಂತನೂ ಕೇಕಯ ರಾಜನೂ ಲಿಚ್ಛವಿರಾಜನ ಪಡೆಯ ಮೇಲೆ ಬಿದ್ದರು. ಆತ ರಭಸದಿಂದ ನುಗ್ಗಿ ಬಂದು ಕೇಕಯ ರಾಜನ ತಲೆಯನ್ನು ಕತ್ತರಿಸಿ ಕೆಡವಿದನು. ಅವನ ನೆರವಿಗೆ ನುಗ್ಗಿದ ರುಮಣ್ವಂತನನ್ನು ಸೆರೆಹಿಡಿದನು. ಇದನ್ನು ಕಂಡು ಉದಯನ ಇಮ್ಮಡಿಸಿದ ರೋಷದಿಂದ ಕಾದತೊಡಗಿದನು. ಅವನ ಪರಾಕ್ರಮಕ್ಕೆ ಎದುರು ನಿಲ್ಲಲಾರದೆ ಉಕ್ಕಿ ಬರುವ ಹೊಳೆಗೆ ಉಪ್ಪಿನ ಅಣೆ ಕರಗಿಹೋಗುವ ಹಾಗೆ ಶತ್ರುಸೇನೆ ಸೋತೋಡಿ ಕರಗಿಹೋಯಿತು. ರುಮಣ್ವಂತನು ಮಾತ್ರ ಶತ್ರುಗಳ ಸೆರೆಯಲ್ಲೇ ಉಳಿಯುವಂತಾಯಿತು.

ಈ ಗೆಲವು ದರ್ಶಕನಿಗೆ ಏಕಕಾಲದಲ್ಲಿ ಹರ್ಷ ದುಃಖಗಳೆರಡನ್ನೂ ಉಂಟುಮಾಡಿತು. ಕೇಕಯದರಸನ ಸಾವಿಗೆ ಮರುಗಿ ಅವನೊಡಲನ್ನು ಹುಡುಕಿಸಿ ರಾಜಮರ್ಯಾದೆಗೊಪ್ಪುವಂತೆ ದಹನಮಾಡಿಸಿದನು. ಆ ಮೇಲೆ ಉದಯನನ್ನು ಕಂಡು ಪರಿಪರಿಯಲ್ಲಿ ಉಪಚರಿಸಿ ಕೊಂಡಾಡಿದನು. ನಗರದವರೆಲ್ಲ ನಲವೇರಿ ಹರಸುತ್ತಿರಲು ಉದಯನನೊಡನೆ ನಗರವನ್ನು ಹೊಕ್ಕು ಅರಮನೆಯನ್ನು ಪ್ರವೇಶಿಸಿದನು.

## ೩೫ ಪದ್ಮಾವತಿ ಪರಿಣಯ

ಉದಯನನ ಪರಾಕ್ರಮಕ್ಕೂ ಯುದ್ಧಚಾತುರ್ಯಕ್ಕೂ ಮೆಚ್ಚಿ ದರ್ಶಕ ಮಹಾರಾಜನು ತನ್ನ ತಂಗಿ ಪದ್ಮಾವತಿಗೆ ಅವನೇ ತಕ್ಕ ವರನೆಂದು ನಿಶ್ಚಯಿಸಿದನು. ತನ್ನ ಅಭಿಪ್ರಾಯವನ್ನು ವೃದ್ಧ ಮಂತ್ರಿಯೊಬ್ಬನ ಮೂಲಕ

ಇಬ್ಬರಿಗೂ ಹೇಳಿ ಕಳಿಸಿದನು. ಆತನು ಪದ್ಮಾವತಿಯನ್ನು ಕಂಡು, "ಅಮ್ಮಾ! ಉದಯನನು ನಮ್ಮ ಹಗೆಗಳನ್ನು ಗೆದ್ದವನು; ಆನೆಗಳನ್ನು ಬಗ್ಗಿಸುವ ವೀಣೆ ವಿದ್ಯೆಯಲ್ಲಿ ಬಲ್ಲಿದನು. ರೂಪ ಗುಣದಲ್ಲಿ ಮೇಲಾದವನು. ಅವನಿಗೆ ನಿನ್ನನ್ನು ಮದುವೆಮಾಡಿಕೊಡಬೇಕೆಂದಿದ್ದಾನೆ ನಮ್ಮ ದೊರೆ" ಎಂದು ತಿಳಿಸಿದನು. "ಹೀಗೆ ನಡೆಯಬೇಕಾಗಿ ಬಂದರೆ ನಾನು ಜೀವದೊಡನೆ ಬಾಳಲಾರೆ. ನನ್ನ ಪ್ರೇಮ ಎಂದಿಗೂ ನೆಲೆಗೆಡಲಾರದು" ಎಂದು ನಿಶ್ಚಯಿಸಿ ಪದ್ಮಾವತಿ ಮಾತಾಡದೆ ಮುಗುಳುನಗೆ ನಕ್ಕುಬಿಟ್ಟಳು. ಅರಸನ ಅಭಿಲಾಷೆಯನ್ನು ಕೇಳಿ ಉದಯನನು ಮನಸ್ಸಿನಲ್ಲಿ ಹಿಗ್ಗಿದನು. ಅದನ್ನು ತೋರ್ಪಡಿಸಿಕೊಳ್ಳದೆ, "ವಾಸವದತ್ತೆಯನ್ನೂ ಯೂಗಿಯನ್ನೂ ಕಳೆದುಕೊಂಡು ನನಗೆ ಏನೂ ಬೇಡವಾಗಿದೆ." ಎಂದು ನಿರಾಕರಿಸಿದನು. ಅಮಾತ್ಯನು ಹಲವು ಬಗೆಯಲ್ಲಿ ಸಮಾಧಾನ ಹೇಳಿ ಪದ್ಮಾವತಿಯನ್ನು ಮದುವೆ ಮಾಡಿಕೊಳ್ಳುವುದಕ್ಕೆ ಅವನನ್ನು ಒಡಂಬಡಿಸಿದನು.

ಮಾಣಕನೇ ತಾನೆಂದು ಪದ್ಮಾವತಿ ಅರಿಯಳಾದ್ದರಿಂದ ಅವಳು ಈ ಸಂಬಂಧಕ್ಕೆ ಒಪ್ಪುವುದಿಲ್ಲವೆಂದು ಉದಯನಿಗೆ ಗೊತ್ತು. ಅವನೇ ತಾನೆಂದು ಹೇಗಾದರೂ ಅವಳಿಗೆ ಗೊತ್ತಾಗುವಂತೆ ಮಾಡಬೇಕೆಂದು ನೆನೆದನು. "ನನ್ನ ಜೀವನ ಗೆಳೆಯ ಇಶ್ವೈಚ್ಚನಿಗೆ ತಂದೆ ತಾಯಿಗಳಿಲ್ಲ. ಆ ಬ್ರಾಹ್ಮಣನಿಗೆ ಮದುವೆಯಾದ ಮೇಲೆಯೇ ನನ್ನ ಮದುವೆ ನಡೆಯಬೇಕು" ಎಂದು ವಸಂತನೊಡನೆ ಹೇಳಿ ಕಳಿಸಿನು. ಅದನ್ನು ಕೇಳಿ ದರ್ಶಕರಾಜನು, "ಪದ್ಮಾವತಿಯ ಬ್ರಾಹ್ಮಣಗೆಳತಿ ಯಾಪ್ಯಾಯಿನಿ ಎಂಬ ಕನ್ನೆ ಕುಲಶೀಲಗಳಲ್ಲಿ ಮೇಲಾದವಳು. ಅವಳನ್ನು ಇಶ್ವೈಚ್ಚನಿಗೆ ಮದುವೆ ಮಾಡಿಸಬಹದು" ಎಂದು ತಿಳಿಸಿದನು. ಗೆಳೆಯರೆಲ್ಲ ಸಂತೋಷಿಸಿದರು.

ಪದ್ಮಾವತಿಯನ್ನು ಉದಯನನಿಗೂ ಯಾಪ್ಯಾಯಿನಿಯನ್ನು ಇಶ್ವೈಚ್ಚನಿಗೂ ಕೊಟ್ಟು ಮದುವೆಮಾಡಬೇಕೆಂದಿರುವ ಸಂಗತಿಯನ್ನು ರಾಜಮಾತೆಗೆ ಅರಿಕೆಮಾಡಲು ಆಕೆ ಆನಂದಗೊಂಡು ಹರಸಿದಳು. ತನ್ನ ಪ್ರಾಣಸ್ನೇಹಿತೆ ತನ್ನನ್ನು ಅಗಲಿ ಹೋಗುವಳಲ್ಲಾ ಎಂದು ಪದ್ಮಾವತಿಗೆ ತಾಳಲಾರದಷ್ಟು ಸಂಕಟ. ಆದರೂ ಅವಳ ಮಂಗಳಕ್ಕೆ ನಲಿಯುವುದು ಕರ್ತವ್ಯವೆಂದು ಭಾವಿಸಿ ಮನಸ್ಸಮಾಧಾನಮಾಡಿಕೊಂಡು ತನ್ನ ಆಭರಣವನ್ನೆಲ್ಲ ಅವಳಿಗೆ

ತೊಡಿಸಿ ತಬ್ಬಿ ಉಪಚರಿಸಿದಳು. "ಮದುವೆ ಮಂಗಳದಲ್ಲಿ ನನ್ನನ್ನು ಮರೆಯ ಬೇಡ; ಬೇಗ ಬಂದು ಬಿಡು" ಎಂದು ಹೇಳಿ, ಪಿವಿಗೆಯೇರಿಸಿ ಕಳಿಸಿ ಕೊಟ್ಟಳು.

ರಾಜವೈಭವದಿಂದಲೇ ಮದುವೆ ನಡೆಯಿತು. ಇಶ್ವೈಚ್ಛನೂ ಯಾಪ್ಯಾಯಿನಿಯೂ ಹಸೆಯ ಮೇಲೆ ಕೂತಿದ್ದಾಗ ಉದಯನನು ಪಕ್ಕದಲ್ಲಿಯೇ ಇದ್ದನು. ಇಶ್ವೈಚ್ಛನನ್ನು ಕುರಿತು, "ನಾವು ಮಗಧಕ್ಕೆ ಬಂದದ್ದು ಒಳ್ಳೆಯದೇ ಆಯಿತು. ನಮ್ಮ ಕೌಶಾಂಬಿಯನ್ನೂ ಯಮುನೆಯನ್ನೂ ಯಾಪ್ಯಾಯಿನಿ ನೋಡಿ ಸಂತೋಷಿಸುವುದಕ್ಕೆ ಕಾರಣವಾಯಿತು" ಎಂದು ಯಾಪ್ಯಾಯಿನಿಗೆ ಕೇಳಿಸುವಂತೆ ನುಡಿದನು. "ಮಾಣಕನ ದನಿಯಂತಿದೆಯಲ್ಲಾ" ಎಂದು ಅವಳಿಗೆ ಸಂಶಯವಾಯಿತು. ಕಡೆಗಣ್ಣಿನಲ್ಲಿ ನೋಡಿ ಸಂಶಯವನ್ನು ಪರಿಹರಿಸಿಕೊಂಡಳು. ಮದುವೆ ಮುಗಿದ ಮೇಲೆ ಪದ್ಮೆಯ ಅಪೇಕ್ಷೆಯಂತೆ ಆ ಮಂಗಳ ವೇಷದಿಂದಲೇ ಶಿಬಿಕೆಯೇರಿ ಅವಳ ಬಳಿ ಹೋದನು. ಹೋಗಿ, "ಉದಯನನು ಬೇರೆ ಯಾರೂ ಅಲ್ಲ, ಮಾಣಕನೇ. ನೀನು ವ್ಯಥೆಪಡ ಬೇಡ" ಎಂದು ತಾನು ಕಂಡ ನಿಜವನ್ನು ತಿಳಿಸಿದಳು.

ಪದ್ಮಾವತಿಗೆ ಗೆಳತಿಯ ಮಾತು ಸಾಕಾಗಲಿಲ್ಲ. ಉದಯನನು ಒಪ್ಪಿಕೊಳ್ಳಲಿಲ್ಲ. ಇದನ್ನರಿತ ಉದಯನನು ತನ್ನ ಚಿತ್ರಪಟವನ್ನು ಯಾಪ್ಯಾಯಿನಿಯ ಕೈಗೆ ಕೊಟ್ಟು, ಗುರುತಿಗಾಗಿ ತನಗೂ ಪದ್ಮಾವತಿಗೂ ಇಬ್ಬರಿಗೆ ಮಾತ್ರ ಗೊತ್ತಿದ್ದ ಕೆಲವು ರಹಸ್ಯಗಳನ್ನು ಹೇಳಿಕಳಿಸಿದನು. ರೂಪದಲ್ಲಿ ವ್ಯತ್ಯಾಸವಿಲ್ಲವೆಂದು ಕಂಡುಬಂದರೂ ಉದಯನನೇ ಮಾಣಕನೆಂದು ಪದ್ಮಾವತಿ ಒಪ್ಪಿಕೊಳ್ಳಲಾರದೆ ಹೋದಳು. ಆ ಪಟವನ್ನು ಕೈಯಲ್ಲಿ ಮುಟ್ಟಲೂ ನಿರಾಕರಿಸಿದಳು. ಆಗ ಯಾಪ್ಯಾಯಿನಿ ಗುರುತಿನ ರಹಸ್ಯಗಳನ್ನು ತಿಳಿಸಿದಳು. ಕೇಳಿ ಪದ್ಮೆಗೆ ಸಂಶಯ ನಿವಾರಣೆಯಾಯಿತು. ಆನಂದ ಹೊಂದಿ ಆಸೆಯಿಂದ ಆ ಪಟವನ್ನು ಕೈಗೆ ತೆಗೆದುಕೊಂಡಳು.

ಕೆಲವು ದಿನ ಕಳೆದ ಮೇಲೆ ಪದ್ಮಾವತಿಗೂ ಉದಯನನಿಗೂ ಸುಮುಹೂರ್ತದಲ್ಲಿ ಬಹು ವೈಭವದಿಂದ ವಿವಾಹ ಮಂಗಳ ನೆರವೇರಿತು.

## ೩೭ ಕೌಶಾಂಬಿ ಕೈಸೇರಿತು

ಉದಯನನಿಗೆ ಸದಾ ರುಮಣ್ವಂತನ ಯೋಚನೆ. ಅವನನ್ನು ಬಿಡಿಸಿ ಕೊಂಡು ಬರಬೇಕೆಂದು ದರ್ಶಕನೊಡನೆ ಮಾತೆತ್ತಿದನು. ದರ್ಶಕನಿ ಅಷ್ಟು ಮಾತ್ರದಲ್ಲಿ ತೃಪ್ತಿಯಿಲ್ಲ. ತಾನಾಗಿ ಬಂದು ಮಗಧದ ಹಗೆಗಳನ್ ಹೊಡೆದೋಡಿಸಿದ ಉಪಕಾರಕ್ಕೆ ಪ್ರತಿಯಾಗಿ ಕೌಶಾಂಬಿಯನ್ನೇ ಗೆದ್ ಕೊಡಬೇಕೆಂದು ದೊಡ್ಡ ಆಸೆ. ಅದಕ್ಕಾಗಿ ಸಿದ್ಧತೆ ನಡೆಸುತ್ತಿದ್ದನು.

ಕೆಲವು ದಿನ ಕಳೆಯುವುದರಲ್ಲಿ ಉದಯನನೂ ಆರುಣಿಯ ಮೇ ದಂಡೆತ್ತಿ ಹೊರಡಬೇಕೆಂದು ಬಯಸಿದನು. ದರ್ಶಕನು ತನ್ನ ಮನಸ್ ತಡೆಯುವಂತೆ ತಂಗಿಗೆ ಬಳುವಳಿ ಕೊಟ್ಟನು. ಸಮಸ್ತ ಸಾಧನಗಳಿಂ ಕೂಡಿದ ದೊಡ್ಡ ದಂಡನ್ನೂ ಅದನ್ನು ಚತುರತೆಯಿಂದ ನಡಸಿ ಜಯಗಳಿ ಬಲ್ಲ ನಾಯಕರನ್ನೂ ನೀತಿನಿಪುಣರಾದ ಮಂತ್ರಿಗಳನ್ನೂ ಜೊತೆಗೂ ಕಳಿಸಿದನು. ಉದಯನನು ದರ್ಶಕ ಮಹಾರಾಜನನ್ನು ಬೀಳ್ಕೊಂಡ ಪದ್ಮಾವತಿಯೊಡನೆ ಪ್ರಯಾಣ ಮಾಡಿದನು.

ಸ್ವಲ್ಪ ದೂರ ಹೋಗಿ ಒಂದು ಕಡೆ ತಂಗಿದನು. ಆಗ, ಪಾಂಚಾ ರಾಜನ ಮೇಲೆ ದಂಡೆತ್ತಿ ಬರಲು ಅದು ತಕ್ಕ ಸಮಯವೆಂದು ಯೂಗಿಯಿಂ ವಸಂತಕನಿಗೆ ಓಲೆ ಬಂತು. ಅಷ್ಟರಲ್ಲಿ ಉದಯನನ ತಮ್ಮಂದಿರು ಪಿಂಗ ಕಟಕರೂ ಅಲ್ಲಿ ಬಂದರು. ಅವರು ಅಣ್ಣನನ್ನು ಕಂಡು ಆರುಣಿಯ ಕೆಟ್ ಳಿಕೆಗೆ ತಾವು ನೊಂದದ್ದನ್ನೂ ಜನ ನೋಯುತ್ತಿರುವುದನ್ನೂ ವಿವರಿಸಿದರು ಉದಯನನು ಅವರನ್ನು ಪ್ರೀತಿಯಿಂದ ತಬ್ಬಿ ಆದರಿಸಿದನು. "ಮಂತ್ರಿಗ ಮಾತಿನಂತೆ ನಡೆಯದೆ ತಪ್ಪಿದ ಅಲ್ಪ ನಾನು. ನನ್ನಿಂದ ನೀವೂ ಕಷ್ಟ ಗುರಿಯಾದಿರಿ" ಎಂದು ನೊಂದುಕೊಂಡನು. "ನಿಮ್ಮನ್ನು ಪಡೆದದ್ದರಿಂ ನನ್ನ ಕೊರತೆಯೆಲ್ಲ ಮಾಯವಾಯಿತು. ಇನ್ನು ಹಗೆಗಳು ನಾಶವಾಗುವು ನಿಶ್ಚಯ" ಎಂದು ಧೈರ್ಯ ಹೇಳಿ ಸಮಾಧಾನಪಡಿಸಿದನು.

ಮಗಧದಿಂದ ಬಂದ ದಂಡಿನ ಜೊತೆಗೆ ಪಿಂಗಲ ಕಟಕರು ಸಿದ್ಧಪಡಿಸಿ ಹನ್ನೆರಡು ಸಾವಿರ ವೀರರ ಪಡೆಯೂ ಕೂಡಿತು. ಉದಯನನು ಬೇ

ನವರಿಂದ ಶತ್ರುವಿನ ಮರ್ಮಗಳನ್ನರಿತುಕೊಂಡು ಸರಿಯಾದ ಸಮಯ ನೋಡಿ ದಾಳಿಯಿಟ್ಟನು. ಎರಡು ಕಡೆಯವರೂ ಹಟತೊಟ್ಟು ಕಾದ ತೊಡಗಿದರು.

ದೊಡ್ಡ ಯುದ್ಧ ನಡೆಯಿತು; ಹಲವರು ಮಡಿದೊರಗಿದರು. ಕಡೆಗೆ ಆರುಣಿ ತಾನೇ ಕಾದ ಹೊರಟನು. ಕೆಟ್ಟ ಶಕುನಗಳನ್ನು ಕಂಡು ಮಂತ್ರಿಗಳು, "ಈಗ ನೀವು ಮುನ್ನುಗ್ಗುವುದು ಸರಿಯಲ್ಲ" ಎಂದು ಸಲಹೆ ಮಾಡಿದರು. ಆ ಹಿತವಚನವನ್ನು ಲಕ್ಷಿಸದೆ ಆರುಣಿ ಸೊಕ್ಕಿನಿಂದ ನುಗ್ಗಿ ಬಂದನು. ಅವನು ಬಂದವ್ಪನ್ನು ಕಂಡು ಉದಯನನೂ ಅವನನ್ನೆದುರಿಸಿ ಛಲದಿಂದ ಹೋರಿದನು. ಕಡೆಯಲ್ಲಿ ಕಾರ್ತವೀರ್ಯಾರ್ಜುನನನ್ನು ಕೊಂದ ಪರಶುರಾಮನಂತೆ ಪಾಂಚಾಲರಾಜ ಆರುಣಿಯನ್ನು ಉದಯನನು ಕೊಂದು ಕೆಡವಿದನು.

ವಿಜಯಧ್ವಜವನ್ನು ಎತ್ತಿ ಕಟ್ಟಿದರು ಆನೆಯ ಮೇಲೆ ನಗಾರಿಯನ್ನೇರಿಸಿ ಗೆಲವನ್ನು ಡಂಗುರ ಹೊಡೆದು ಸಾರಿದರು. ಶತ್ರುಸೇನೆ ಚೆದರಿ ಓಡಿತು. ಉದಯನನ ದಂಡು ಕೌಶಾಂಬಿಯ ಹೆಬ್ಬಾಗಿಲಿಗೆ ಬಂದು ನಿಂತಿತು.

ಕೋಟೆಯ ಬಾಗಿಲು ಹಾಕಿ ಭದ್ರಪಡಿಸಿ ನಗರದವರು ಒಳಗಡಗಿದ್ದರು. ವರ್ಷಕಾರನೆಂಬ ದರ್ಶಕನ ಮಂತ್ರಿ ಮುಂದೆ ಬಂದು, "ನಿಮ್ಮ ದೊರೆ ಉದಯನನು ಆರುಣಿಯನ್ನು ಕದನದಲ್ಲಿ ಕೊಂದನು. ಇನ್ನು ಅಂಜಬೇಡಿ. ಕೋಟೆಯ ಕದವನ್ನು ತೆರೆದುಬಿಡಿ" ಎಂದು ಹೇಳಿದನು. ನಗರದವರಿಗೆ ನಂಬಿಕೆ ಬರಲಿಲ್ಲ. "ಉದಯನನ ಮುದ್ರೆಯನ್ನು ಕಂಡಲ್ಲದೆ ಕದ ತೆರೆಯುವುದಿಲ್ಲ" ಎಂದು ನಿರಾಕರಿಸಿದರು. ಆಗ ವೃಷಭಕನು ಎದುರಿಗೆ ಬಂದು ನಿಂತನು.

ನಗರದವರಿಗೆ ಸಂದೇಹ ನಿವಾರಣೆಯಾಗಿ ಒಡನೆಯೇ ಕದ ತೆರೆದರು. ಬಾವುಟವೆತ್ತಿ ಮಂಗಳವಾದ್ಯ ಭೋರಿಡುತ್ತಿರಲು ಹೊರಗೆ ಬಂದು ತಮ್ಮ ಪ್ರೀತಿಯ ದೊರೆಯನ್ನು ಎದುರುಗೊಂಡರು. "ಉದಯನನ್ ಬಾಳ್ಗೆ!" ಎಂದು ದಿಕ್ಕುಗಳು ಮೊಳಗುವಂತೆ ಉಗ್ಗಡಿಸುತ್ತ ಅವನನ್ನು ನಗರದೊಳಕ್ಕೆ ಕರೆದುಕೊಂಡು ಹೋದರು. ಆನೆಯ ಮೇಲೆ ಬೆಳ್ಗೊಡೆಯ ನೆರಳಿನಲ್ಲಿ ಕುಳಿತು ಜನರ ಆನಂದವನ್ನುಕ್ಕಿಸುತ್ತ ಉದಯನನು ಶುಭ ಮುಹೂರ್ತದಲ್ಲಿ ನಗರವನ್ನು ಪ್ರವೇಶಿಸಿದನು. ಬೀದಿ ಬೀದಿಯಲ್ಲೂ ಜನ ಕಿಕ್ಕಿರಿದು ನೆರೆದರು.

ಗೋಪುರ ಗೋಪುರದ ಮೇಲೂ ನಿಂತು ನೋಡುತ್ತಿದ್ದರು "ಚಿರಕಾಲ ಲೋಕವನ್ನು ಕಾಪಾಡುತ್ತ ಬಾಳು" ಎಂದು ಹರಸುತ್ತ ಹೂಮಳೆ ಕರೆದರು. ಹಲ್ಲಿಗೆ ಮುಂದುವರಿಯುತ್ತ ಉದಯನನು ಅರಮನೆಯನ್ನು ಸೇರಿದನು.

## ೩೭. ಶುಭಸ್ಥಾಪನೆ

ಹಗೆಯನ್ನಡಗಿಸಿ ರಾಜಧಾನಿಯನ್ನು ಮತ್ತೆ ಕೈವಶ ಮಾಡಿಕೊಂಡ ಉದಯನನು ತನಗೆ ಉಪಕಾರ ಮಾಡಿದವರನ್ನೆಲ್ಲ ನೆನೆನೆನೆದು ಉಪಚಾರ ಮಾಡಿ ಮನ್ನಿಸಿದನು. ಮೊದಲು, ಯುದ್ಧದಲ್ಲಿ ಸತ್ತು ಬಿದ್ದ ಅರುಣಿಗೆ ಅವನ ಬಂಧುಗಳಿಂದ ಉತ್ತರಕ್ರಿಯೆ ಮಾಡಿಸಿದನು. ಅವನ ಹೆಂಡಿರ ಮಕ್ಕಳಿಗೆ ಕೇಳಿದಷ್ಟು ಹೊನ್ನು ಕೊಟ್ಟು ಬೇರೆ ಕಡೆ ಹೋಗಿ ಸುಖವಾಗಿ ಬಾಳುವಂತೆ ಕಳಿಸಿಕೊಟ್ಟನು.

ತನಗೆ ನೆರವಾಗಿ ಬಂದು ಗೆಲವನ್ನು ತಂದು ಕೊಟ್ಟ ದರ್ಶಕನ ಮಂತ್ರಿ ವರ್ಷಕರನನ್ನು ತಬ್ಬಿ ಕೊಂಡಾಡಿ ಅವನಿಗೆ ತನ್ನ ಆನೆಯನ್ನೂ ಆಭರಣ ಗಳನ್ನೂ ಕೊಟ್ಟನು; ನೆತ್ತರುಕೊಡಿಗೆಯಾಗಿ ಹತ್ತು ಊರುಗಳನ್ನು ಕೊಟ್ಟನು. ದರ್ಶಕನ ಸೇನೆಯಲ್ಲಿ ಬಂದ ವೀರರಿಗೆ ಬೇಡಿದ್ದನ್ನು ಕೊಟ್ಟು ತೃಪ್ತಿಪಡಿಸಿದನು. ದರ್ಶಕ ಮಹಾರಾಜನಿಗೆ ಅನರ್ಘ್ಯ ವಸ್ತ್ರಾಭರಣಗಳ ಕಾಣಿಕೆಯನ್ನು ತನ್ನ ನೆಂಟರ ಮೂಲಕ ಕಳಿಸಿ, ಆ ಸೇನೆಯನ್ನು ಮಗಧಕ್ಕೆ ಪ್ರಯಾಣಮಾಡಿಸಿದನು.

ಆ ಮೇಲೆ ತನ್ನ ದಂಡಾಳುಗಳಿಗೆಲ್ಲ ಮೆಚ್ಚು ನುಡಿದು ಉಚಿತ ರೀತಿ ಯಲ್ಲಿ ಮರ್ಯಾದೆ ಮಾಡಿದನು. ಅರುಣಿಯರಸನು ಏರ್ಪಡಿಸಿದ್ದ ಕಟ್ಟಳೆ ಕ್ರಮಗಳನ್ನೆಲ್ಲ ತಪ್ಪಿಸಿ ಮೊದಲಿನಂತೆಯೆ ನಲ್ಲಾಳ್ಕೆಯನ್ನು ನೆಲೆಗೊಳಿಸಿದನು. ಹಗೆಯ ಆಡಳಿತದಲ್ಲಿ ಸಿಕ್ಕಿ ನೊಂದಿದ್ದವರನ್ನೆಲ್ಲಾ ಕರಸಿ ಅವರು ಪಟ್ಟ ನೋವೆಲ್ಲ ಮರೆಯುವಂತೆ ಅವರಿಗೆ ಪರಿಹಾರ ಕೊಡಿಸಿದನು. "ತಮಗೆ ಸೇರಿದ್ದವನ್ನು ನಡುವೆ ಕಳೆದುಕೊಂಡವರು ಬಂದು ಕೇಳಿ ಅವನ್ನು ಪಡೆಯಲಿ. ದರಿದ್ರರೂ ಉತ್ಸಾಹ ಕುಗ್ಗಿದವರೂ, ಗಂಡಂದಿರನ್ನು ಕಳೆದುಕೊಂಡು ಬಾಳ್ಗೆಟ

ಹೆಂಗಸರೂ, ಅಂಗಕೊರೆಯಾಗಿ ಸಂಕಟಪಡುವವರೂ, ಮುಪ್ಪಿನಿಂದ ಕುಗ್ಗಿ ರಕ್ಷಕರಿಲ್ಲದವರೂ, ಉಳಿದ ಅನಾಥರೂ ತಮಗೆ ಬೇಕಾದ್ದನ್ನು ಕೇಳಿ ಪಡೆದು ಸುಖವಾಗಿ ಬಾಳಲಿ" ಎಂದು ಸಭೆ ಸಭೆಯಲ್ಲಿಯೂ ಬೀದಿ ಬೀದಿಯಲ್ಲಿಯೂ, ದೇವಾಲಯ ಆಶ್ರಮ ಮೊದಲಾದ ಜನಸೇರುವ ಕಡೆಗಳಲ್ಲಿಯೂ ಸಾರಿಸಿ ಪ್ರಸಿದ್ಧಪಡಿಸಿದನು.

ಹೀಗೆ ನಾಡಿನ ಕೊರತೆಯನ್ನು ನೀಗಿಸಿ ಪ್ರಜೆಗಳನ್ನು ತೃಪ್ತಿಪಡಿಸಿ ಮತ್ತೆ ಸುಖಸಮೃದ್ಧಿ ನೆಲಸುವಂತೆ ಮಾಡಿದನು. ತಾನು ಮಾಡಬೇಕಾದ ಕರ್ತವ್ಯ ಯಾವುದಾದರೂ ಉಳಿದಿದೆಯೇ ಎಂದು ದಿನದಿನವೂ ಪರೀಕ್ಷಿಸಿ ನೋಡಿ ಮಾಡುತ್ತಾ ಬಂದನು. ಎಲ್ಲ ಮುಗಿಯಿತೆಂದುಕೊಂಡಿದ್ದಾಗ ಭದ್ರಾವತಿಯ ನೆನಪು ತಟ್ಟನೆ ಮನಸ್ಸಿಗೆ ಹೊಳೆಯಿತು. ಉಜ್ಜಯಿನಿಯಿಂದ ತನ್ನನ್ನು ದಾಟಿಸಿ ತಂದ ಅದರ ದೊಡ್ಡ ಉಪಕಾರವನ್ನು ಅದುವರೆಗೂ ಮರೆತದ್ದಕ್ಕಾಗಿ ತುಂಬ ನೊಂದುಕೊಂಡನು.

ಆ ಮೇಲೆ ಅದು ಬಿದ್ದ ಸ್ಥಳ ಇಂಥದೆಂದು ಕಂಡುಹಿಡಿಯಲು ತಕ್ಕ ಗುರುತು ಹೇಳಿ, ಅದರ ಮೂಳೆ ಮೊದಲಾದುವನ್ನು ತರುವಂತೆ ಆಳುಗಳಿಗೆ ಅಪ್ಪಣೆಮಾಡಿದನು. ಆ ಪಕ್ಕದಲ್ಲಿರುವ ಬೇಡನಾಯಕರನ್ನೂ ಕುರುಬರನ್ನೂ ಕರಸಿ, "ಆ ಪಿಡಿ ಬಿದ್ದ ಕಡೆ ಒಂದು ಗುಡಿಯನ್ನು ಕಟ್ಟಿ, ಅಲ್ಲಿ ಅದರ ಮೂರ್ತಿಯನ್ನಿಟ್ಟು ಬೆಳಗು ಬೈಗುಗಳಲ್ಲಿ ಅದಕ್ಕೆ ಪೂಜೆ ಮಾಡಬೇಕು. ದಾರಿಗರಿಗೆ ಅರವಟ್ಟಿಗೆ ಇಟ್ಟು ಅನ್ನ ನೀರು ಕೊಡುತ್ತಿರಬೇಕು" ಎಂದು ಅಪ್ಪಣೆಮಾಡಿದನು. ಅವರಿಗೆ ಬೇಕಾದಷ್ಟು ಧನವನ್ನು ಕೊಟ್ಟು ಶಿಲ್ಪಿಗಳನ್ನು ಜೊತೆಯಲ್ಲಿ ಕಳಿಸಿಕೊಟ್ಟನು.

ಭದ್ರಾವತಿಯ ಅಸ್ಥಿ ಬಂದ ಮೇಲೆ ಅದನ್ನು ಒಂದು ಸುಂದರಮಂದಿರದಲ್ಲಿ ರಕ್ಷಿಸಿಟ್ಟನು. ಆ ಮಂದಿರದ ಬಳಿಯಲ್ಲಿ ಒಂದು ಗೆಲುಬಾಗಿಲನ್ನು ನಿಲ್ಲಿಸಿ ಅದಕ್ಕೆ ಆ ಪಿಡಿಯ ಹೆಸರಿಟ್ಟನು. ಆ ಮಂದಿರದಲ್ಲಿಯೂ ಭದ್ರಾವತಿಯ ಮೂರ್ತಿಯನ್ನಿಟ್ಟು ಪೂಜೆಗೆ ವ್ಯವಸ್ಥೆಮಾಡಿದನು. ಅದರ ಸುತ್ತುವಳಯದಲ್ಲಿ ಅನ್ನಸತ್ರ, ಅರವಟ್ಟಿಗೆ, ಗಾನಮಂದಿರ, ನೃತ್ಯಶಾಲೆ, ಸಾಹಿತ್ಯಸಭೆ ಮೊದಲಾದುವನ್ನು ನಿರ್ಮಿಸಿದನು. ಅಲ್ಲಿ ನಿತ್ಯೋತ್ಸವಗಳು ನಡೆಯುವಂತಾಯಿತು.

ಇಷ್ಟೆಲ್ಲ ಆದ ಮೇಲೆ ಸುಖಿಯಾಗಿ ಪದ್ಮಾವತಿಯೊಡನೆ ಆನಂದದಿಂದ ಕಾಲ ಕಳೆಯುತ್ತಿದ್ದನು.

## ೩೮. ಘೋಷವತಿಯ ಬರವು

ಉದಯನನು ತನ್ನ ಕರ್ತವ್ಯಗಳನ್ನು ನೆರವೇರಿಸಿ ಸಂತೋಷದಿಂದಿರುವ ಕಾಲದಲ್ಲಿ ಉಜ್ಜೈನಿಯ ಬ್ರಾಹ್ಮಣನೊಬ್ಬನು ತನ್ನ ಬಂಧುಗಳನ್ನು ನೋಡುವುದಕ್ಕೆಂದು ಕೌಶಾಂಬಿಗೆ ಹೊರಟು ಬರುತ್ತಿದ್ದನು. ವಿಂಧ್ಯದಡವಿಯಲ್ಲಿ ನಡೆಯುತ್ತಿರುವಾಗ ನೀರು ಕುಡಿಯ ಹೊರಟ ಆನೆಯ ಹಿಂಡು ಎದುರಿಗೆ ಸಿಕ್ಕಿತು. ಬ್ರಾಹ್ಮಣ ಹೆದರಿ ಒಂದು ಎತ್ತರವಾದ ಮರವನ್ನು ಹತ್ತಿ ಕುಳಿತನು.

ವೀಣೆಯುಲಿ ಕೇಳಿದಂತಾಗಿ ಸುತ್ತ ಮುತ್ತ ನೋಡಿದನು. ಪಕ್ಕದ ಬಿದಿರುಮೆಳೆಯಲ್ಲಿ ಒಂದು ವೀಣೆ ಸಿಕ್ಕಿಕೊಂಡಿತ್ತು. ಗಾಳಿ ಬೀಸಿದಾಗ ರೆಂಬೆ ಮೀಟಿ ನಾದ ಹೊಮ್ಮುತ್ತಿತ್ತು. ಆ ನಾದಕ್ಕೆ ಆನೆಗಳೆಲ್ಲ ಶಾಂತವಾಗಿ ನಿಂತು ಕಿವಿಗೊಟ್ಟು ಆಲಿಸತೊಡಗಿದವು. ಬ್ರಾಹ್ಮಣನಿಗೆ ಬೆರಗಾಯಿತು. ಆನೆಯ ಹಿಂಡು ಹೊರಟು ಹೋದ ಮೇಲೆ ಮರದಿಂದಿಳಿದು ಬಂದು ಮೆಳೆಯಲ್ಲಿ ಸಿಕ್ಕಿದ್ದ ವೀಣೆಯನ್ನು ಮೆಲ್ಲನೆ ಬಿಡಿಸಿ ತೆಗೆದುಕೊಂಡನು. "ಯಾರೋ ದೇವತೆ ಇದನ್ನು ಇಲ್ಲಿ ಬಿಟ್ಟು ಹೋಗಿರಬಹುದು" ಎಂದು ಭಾವಿಸಿ, ಹಲವು ಹೂವುಗಳಿಂದ ಅರ್ಚಿಸಿದನು. ಆ ಮೇಲೆ ಅದನ್ನು ಕೈಯಲ್ಲಿ ಎತ್ತಿಕೊಂಡು ಪ್ರಯಾಣವನ್ನು ಮುಂದುವರಿಸಿದನು.

ಅವನ ಬಂಧುಗಳ ಮನೆ ಅರಮನೆಯ ಹತ್ತಿರವೇ ಇತ್ತು. ಸಂಜೆ ಹೊತ್ತು ನೆಂಟರೊಡನೆ ನಲಿಯುತ್ತಿರುವಾಗ ಬ್ರಾಹ್ಮಣ ವೀಣೆ ಬಾಜಿಸಿದನು. ಅರಮನೆಯ ಮೇಲ್ಮಾಡದಲ್ಲಿ ಪದ್ಮಾವತಿಯೊಡನೆ ಸರಸ ಸಂಭಾಷಣೆಯಲ್ಲಿದ್ದ ಉದಯನ ಆ ಇನಿದನಿಯನ್ನಾಲಿಸಿ ಪರವಶನಾದನು. ತಟ್ಟನೆ ಹೊರಬಂದನು. ಹತ್ತಿರ ಬಂದ ವಸಂತಕನಿಗೆ, "ನಮ್ಮ ಘೋಷವತಿಯ ದನಿ ಕೇಳುತ್ತಿದೆ. ಬೇಗ ಹೋಗಿ ಅದನ್ನು ಬಾಜಿಸುತ್ತಿರುವವನನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ಹೇಳಿದನು.

ಅವನು ಧ್ವನಿ ಹೊಮ್ಮುತ್ತಿದ್ದ ಮನೆಗೆ ಹೋಗಿ ಬಾಜಿಸುತ್ತಿದ್ದವನನ್ನು "ಈ ವೀಣೆ ನಿನಗೆ ಹೇಗೆ ಸಿಕ್ಕಿತು?" ಎಂದು ಕೇಳಿದನು. ನರ್ಮದಾ ನದಿಯನ್ನು ದಾಟಿ ಬರುತ್ತಿರುವಾಗ ಅಡವಿಯ ಮೆಳೆಯಲ್ಲಿ ಸಿಕ್ಕಿತೆಂದು ಆ ಬ್ರಾಹ್ಮಣ ಆನೆ ಹಿಂಡಿನ ಕಥೆ ಹೇಳಿದನು. ವಸಂತಕನು ವೀಣೆಯೊಡನೆ ಅವನನ್ನು ಅರಸನ ಬಳಿಗೆ ಕರೆತಂದನು; "ನಾವು ಉಜ್ಜಯನಿಯಿಂದ ಭದ್ರಾವತಿಯ ಮೇಲೆ ವೇಗವಾಗಿ ಬರುತ್ತಿದ್ದಾಗ ವಿಂಧ್ಯದ ತಪ್ಪಲಿನಲ್ಲಿ ಬಿದ್ದುಹೋದ ಘೋಷವತಿ ಇದು" ಎಂದು ಆ ಬ್ರಾಹ್ಮಣನಿಗೆ ತಿಳಿಯಪಡಿಸಿದನು.

ಉದಯನನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. "ಬಾ ನನ್ನ ನಲ್ವೀಣೆ! ಬಾ, ವತ್ಸನಮೃತವೆ!" ಎಂದು ಹಾಡಿ ಹಾಡಿ ಹೊಗಳಿ ಆದರದಿಂದ ಅದನ್ನು ಕೈಗೆತ್ತಿಕೊಂಡನು. ಆ ಬ್ರಾಹ್ಮಣನಿಗೆ ಬಯಸಿದ್ದನ್ನೆಲ್ಲ ಕೊಟ್ಟು ತಣಿಸಿ ಉಪಚರಿಸಿ ಕಳಿಸಿದನು. ಘೋಷವತಿ ದೊರೆತ ಮೇಲೆ ಅವನ ಮನಸ್ಸಿನ ಸ್ಥಿತಿ ವಿಚಿತ್ರವಾಯಿತು. ಒಂದು ಕ್ಷಣ ನಲಿಯುವನು; ಮರು ಕ್ಷಣವೇ ಮರುಗಿ ಮನಕರಗುವನು; ಮತ್ತೆ ಶಾಂತವಾಗಿ ಅದನ್ನು ತಬ್ಬಿ ಮುದ್ದಿಸಿ ಕೊಂಡಾಡುವನು. ಆ ರಾತ್ರಿಯೆಲ್ಲ ವಾಸವದತ್ತೆಯನ್ನು ನೆನೆಯುತ್ತಲೇ ಹೊತ್ತು ಕಳೆದನು.

ಬೆಳಗಾದ ಕೂಡಲೆ ಶಿಲ್ಪಿಗಳಿಂದ ವೀಣೆಯನ್ನು ಹೊಸದು ಮಾಡಿಸಿದನು. "ವಾಸವದತ್ತೇ! ನಿನ್ನ ವೀಣೆ ಇಗೋ ಬಂದುಬಿಟ್ಟಿತು. ನೀನು ಬಂದು ಬಾಜಿಸಿ ಸಂತೋಷಪಡುವುದಿಲ್ಲವೇ?" ಎಂದು ಅಡಿಗಡಿಗೆ ಅವಳನ್ನು ನೆನೆದು ಹಂಬಲಿಸುತ್ತಿದ್ದನು. ತಮ್ಮಂದಿರನ್ನೂ ಘೋಷವತಿಯನ್ನೂ ಪಡೆದರೂ ಸ್ವಲ್ಪವೂ ಸಂತೋಷವಿಲ್ಲದೆ ಕಾಲ ತಳ್ಳುತ್ತಿದ್ದನು.

ಒಂದು ದಿನ ಘೋಷವತಿಯನ್ನು ಬಾಜಿಸುತ್ತ ಆನಂದದಿಂದಿರುವಾಗ ಪದ್ಮಾವತಿ, "ಅರಸಾ, ವಾಸವದತ್ತೆ ಕಲಿತ ಈ ವೀಣೆಯನ್ನು ನಾನೂ ಕಲಿಯಬೇಕೆಂದಿದ್ದೇನೆ. ಕಲಿಸಬೇಕು" ಎಂದು ಮೆಲ್ಲನೆ ಕೇಳಿದಳು. ವಾಸವದತ್ತೆಯ ನೆನವಿನಿಂದ ಅವನಿಗೆ ಮನ ಕಲಕಿತು. ಯಾವುದೊಂದು ಉತ್ತರವನ್ನೂ ಕೊಡಲಾರದೆ ಸುಮ್ಮನೆ ಕುಳಿತನು. ಪದ್ಮೆ, "ವಾಸವದತ್ತೆಯನ್ನು ನೆನೆದು ಸಂಕಟಪಡುವುದು ನ್ಯಾಯವೇ. ಇದೇ ಮೇಲಾದ

ನಡವಳಿಕೆ” ಎಂದುಕೊಂಡಳು. ಏನೋ ಕೆಲಸವಿರುವವಳಂತೆ ಅಲ್ಲಿಂದೆದ್ದು ಹೊರಟು ಹೋದಳು.

ಅಂದು ವಸಂತಕನು ಉದಯನನನ್ನು ಕಂಡು, “ಇದುವರೆಗೂ ನೀನು ಇಬ್ಬರು ಹೆಂಡಿರನ್ನೂ ಸಮವಾಗಿ ಕಾಣುತ್ತಿದ್ದೆ. ಇಂದು ಪದ್ಮಾವತಿಯಲ್ಲಿ ಪ್ರೀತಿಗುಂದಿ ಬಿಟ್ಟೆಯಲ್ಲ!” ಎಂದು ಕೇಳಿದನು. ವಸಂತಕನ ಮಾತು ಉದಯನನ ಕಿವಿಗೆ ಬೀಳಲೇ ಇಲ್ಲ. ಪದ್ಮಾವತಿಯನ್ನು ನೆನೆಯಲೂ ಇಲ್ಲ. ವಾಸವದತ್ತೆಯನ್ನು ಕಂಡಾಗಿನಿಂದ ಅವಳು ಸತ್ತಳೆಂದು ಕೇಳಿದಾಗಿನ ವರೆಗೂ ನಡೆದದ್ದನ್ನೆಲ್ಲ ಮತ್ತೆ ಮತ್ತೆ ಆಡಿ ಅಲವತ್ತುಕೊಳ್ಳುತ್ತಿದ್ದನು. ರಾತ್ರಿ ಹೊತ್ತಾದ ಮೇಲೆ ಮಲಗಿದನು.

ಕನಸಿನಲ್ಲಿ ಒಬ್ಬ ದೇವತೆ ಕಾಣಿಸಿಕೊಂಡಳು. ಅವಳು ಒಂದು ಬೆಳ್ದಾವರೆ ಹೂವನ್ನು ಹಿಡಿದಿದ್ದಳು. ಅದರ ಮೇಲೆ ಒಂದು ಬಿಳಿಯ ಗೂಳಿ ಮಲಗಿತ್ತು. ಆ ಹೂವನ್ನು ಅವಳು ಉದಯನನಿಗೆ ಕೊಟ್ಟು ಮರೆಯಾದಳು. ಬೆಳಗ್ಗೆ ಎದ್ದು ಈ ಕನಸನ್ನು ಒಬ್ಬ ಮುನಿಗಳಿಗೆ ತಿಳಿಸಲು ಅವರು, “ವಾಸವತ್ತೆ ಸತ್ತದ್ದು ಸುಳ್ಳು. ಅವಳನ್ನು ನೀನು ಬೇಗ ಪಡೆಯುತ್ತೀಯೆ. ಮುಂದೆ ವಿದ್ಯಾಧರ ಚಕ್ರವರ್ತಿಯಾಗುವ ಒಬ್ಬ ಮಗನನ್ನು ಅವಳಲ್ಲಿ ಪಡೆಯುತ್ತೀಯೆ” ಎಂದು ಆ ಕನಸಿಗೆ ಫಲ ಹೇಳಿದರು. ಅದನ್ನು ಕೇಳಿ ಉದಯನನು “ಇದು ಎಂದಿಗೆ ನಿಜವಾದೀತೋ!” ಎಂದು ಕುತೂಹಲಗೊಂಡಿದ್ದನು.

## ೩೯. ವಾಸವದತ್ತೆ ಬಂದಳು

ಇತ್ತ ದರ್ಶಕನು ರುಮಣ್ವಂತನ ಬಿಡುಗಡೆಗೆ ಸಾಮವನ್ನೆ ಬಳಸ ಬಯಸಿದನು. ತಾನು ಕಾಪಾಡಿಟ್ಟುಕೊಂಡಿದ್ದ ಸಂಘರಾಜರ ವಸ್ತುಗಳನ್ನು ಅವರಿಗೆ ಕಳಿಸಿಕೊಟ್ಟು, “ರುಮಣ್ವಂತನನ್ನು ಸೆರೆಯಿಂದ ಬಿಡಿಸಿ ಕಳಿಸಿದರೆ, ನಮ್ಮ ಸೆರೆಯಲ್ಲಿರುವ ನಿಮ್ಮವರನ್ನು ಕಳಿಸುವೆನು” ಎಂದು ನಿಯೋಗಿಗಳನ್ನಟ್ಟಿದನು. ಆ ರಾಜರು,

"ಕೀಳು ಜನಗಳ ಕೂಡೆ ಸುಖವ ಪಡೆವುದಕಿಂತ
ಮೇಲು ಜನಗಳ ಕೂಡೆ ಮಿಗೆ ಹಗೆಯೆ ಇನಿದು !''

ಎಂದು ನೆನೆದು, ದರ್ಶಕನನ್ನು ಹೊಗಳಿ, ರುಮಣ್ವಂತನನ್ನು ಸೆರೆಯಿಂದ ಬಿಡಿಸಿ ಕಳಿಸಿದರು. ರಾಜಗೃಹದಲ್ಲಿ ಸೆರೆಯಿದ್ದವರಿಗೂ ಬಿಡುಗಡೆಯಾಯಿತು. ಅವರೂ ದರ್ಶಕನ ಆದರವನ್ನು ಅಂಗೀಕರಿಸಿ, ಸಂತೋಷದಿಂದ ತಮ್ಮ ನಗರಗಳಿಗೆ ಪ್ರಯಾಣ ಮಾಡಿದರು.

ವಾಸವದತ್ತೆ ಯಾವಾಗ ಬಂದಾಳೋ ಎಂದು ವ್ಯಥೆಪಡುತ್ತಿದ್ದ ಸಮಯದಲ್ಲಿಯೆ ರುಮಣ್ವಂತನು ಬಂದು ಉದಯನನನ್ನು ಕಂಡನು. ಅವನಿಗೆ ಯೂಗಿಯೇ ಬಂದಷ್ಟು ಸಂತೋಷವಾಯಿತು. ಸೆರೆಯಿಂದ ಬಿಡುಗಡೆ ಹೊಂದಿ ಬಂದ ವಿವರವನ್ನೆಲ್ಲ ಕೇಳಿ ತಿಳಿದುಕೊಂಡನು. ತನ್ನನ್ನಗಲಿದ ಬಳಿಕ ಉದಯನನಿಗೆ ಸಂಭವಿಸಿದ ಸಂಗತಿಗಳನ್ನೆಲ್ಲ ವಸಂತಕನು ರುಮಣ್ವಂತನಿಗೆ ವಿಶದವಾಗಿ ತಿಳಿಸಿದನು. ಘೋಷವತಿ ಸಿಕ್ಕಿದ ಸುದ್ದಿ ಬಂದಾಗ ವಾಸವದತ್ತೆಯ ನೆನವು ಮರುಕೊಳಿಸಿ ಉದಯನ ಮತ್ತೆ ದುಃಖದಲ್ಲಿ ಮುಳುಗಿದನು.

ಅವನನ್ನು ಸಂತಯಿಸ ಬಯಸಿ ವಸಂತಕನು, "ಹೆಂಡಿರಿಬ್ಬರಲ್ಲಿ ನಿನಗೆ ಯಾರಲ್ಲಿ ಪ್ರೀತಿ ಹೆಚ್ಚು ?" ಎಂದು ಪ್ರಶ್ನೆ ಮಾಡಿದನು. ''ಶ್ರೇಷ್ಠಳಾದವಳು ವಾಸವದತ್ತೆಯೇ. ನನಗೆ ಪುಣ್ಯವಿಲ್ಲದ್ದರಿಂದ ಅವಳು ಬೆಂಕಿಯಲ್ಲಿ ಸತ್ತಳು" ಎಂದು ಉದಯನ ಮತ್ತೂ ಮರುಗುತ್ತ ಕುಳಿತನು. "ವಾಸವದತ್ತೆಯನ್ನು ಬದುಕಿಸಿ ಕರಸುವ ಮಹಾತ್ಮನನ್ನು ಕಾಣಲೆಂದು ಮಗಧಕ್ಕೆ ಹೋಗಿದ್ದಾಗ ನೀನು ಪದ್ಮಾವತಿಯನ್ನು ಕಂಡು ಪ್ರೀತಿಸಿ ತನ್ಮಯವಾಗಿಬಿಟ್ಟೆಯಲ್ಲಾ ! ಅದು ನ್ಯಾಯವೆ ? ನಿನ್ನ ಮನಸ್ಸು ಒಂದು ಮಾರ್ಗದಲ್ಲಿ ನಿಲ್ಲುವುದಿಲ್ಲ" ಎಂದು ವಸಂತಕನು ಆಕ್ಷೇಪಿಸಿದನು. "ರೂಪಗುಣಗಳಲ್ಲಿ ಪದ್ಮೆ ವಾಸವದತ್ತೆಯನ್ನು ಹೋಲುವುದರಿಂದ ಅವಳಲ್ಲಿ ನನಗೆ ಪ್ರೀತಿ ಹುಟ್ಟಿತು. ಇದಲ್ಲದೆ ಕರ್ಮಫಲವೂ ಕಾರಣವಾಯಿತೆನ್ನಬೇಕು'' ಎಂದು ಉದಯನ ಸಮಾಧಾನ ಹೇಳಿದನು. "ಮಗಧದಲ್ಲಿ ಕಂಡ ಹಿರಿಯರು ಇಲ್ಲಿ ಬಂದಿದ್ದಾರೆ. ವಾಸವದತ್ತೆಯನ್ನು ಕರಸಿಕೊಡುವುದಾಗಿ ಅವರಾಗಿಯೆ ಹೇಳಿದ್ದಾರೆ. ಅದಕ್ಕಾಗಿ, ನೀನು ಕೆಲವು ದಿನ ಪದ್ಮಾವತಿಯನ್ನು ಬಿಟ್ಟು ಒಂಟಿಯಾಗಿ ಪರಿಶುದ್ಧನಾಗಿರ

ಮಾತಾಡತೊಡಗಿದನು. ಆ ಮುನಿಯ ಆಕಾರವನ್ನು ಕಂಡು ದನಿಯನ್ನು ಕೇಳಿ ಮನಸ್ಸಿನಲ್ಲಿ ಸಂದೇಹ ಮೂಡುತ್ತಿತ್ತು. "ಈ ದನಿ ಹಿಂದೆ ಕೇಳಿದಂತಿರುವುದಲ್ಲಾ !" ಎಂದುಕೊಂಡನು. ಏನನ್ನೋ ನೆನೆಯುತ್ತ ಅವನ ಎಡೆಯ ಕಡೆ ಗಮನಿಸಿ ನೋಡಿದನು. ಆನೆಯ ಕೊಂಬು ತಿವಿದ ಕಲೆ ಕಾಣಿಸಿತು ; ಸಂದೇಹ ಪರಿಹಾರವಾಯಿತು.

"ನೀತಿ ನಿಪುಣಾ ! ಯೋಗೀ ! ದತ್ತೆಯನ್ನು ಮರುಹುಟ್ಟಿನಿಂದ ಮರಳಿ ತರುವ ಬಲ್ಮೆಯ ಮುನೀ ! ನಿನ್ನ ಕೃಪೆ ಹೊಸ ಪರಿ. ನಿನಗೆ ವಂದನೆ" ಎಂದು ನುಡಿದು ತೊಟ್ಟ ಹೂಮಾಲೆ ನಸುಕಿಹೋಗುವಂತೆ ತಟ್ಟನೆ ತಬ್ಬಿಕೊಂಡನು. ಗೆಳೆಯರು ಸೀಜೇನು ಸವಿಹಾಲು ಕಲೆತಂತೆ ನಲಿವುಬ್ಬಿ ಹಿಗ್ಗಿದರು. "ಇನ್ನು ಮೇಲೆ ಯಾವುದೇ ಕಾರಣಕ್ಕಾಗಿಯಾದರೂ ನೀನು ಬಿಟ್ಟು ಹೋದರೆ ನಾನು ಜೀವಿಸಲಾರೆ" ಎಂದು ಉದಯನ ಯೋಗಿಯನ್ನು ಕೇಳಿಕೊಂಡನು.

ಆ ಮೇಲೆ ಗೆಳೆಯರು ಅವನನ್ನು ವಾಸವದತ್ತೆಯ ಬಳಿಗೆ ಕರೆದು ಕೊಂಡು ಹೋದರು. "ನಿಮಗೆ ದೊಡ್ಡ ಹಿತವುಂಟಾಗುವುದೆಂದು ನಿಮ್ಮ ಸ್ನೇಹಿತರು ಹೇಳಿದ ಸಲಹೆಯನ್ನು ಒಪ್ಪಿಕೊಂಡು ನಿಮ್ಮ ಅಪ್ಪಣೆ ಕೇಳದೆ ಅಗಲಿ ಹೋದ ಪಾಪಿ ನಾನು. ನನ್ನ ಅಪಚಾರವನ್ನು ಕ್ಷಮಿಸಬೇಕು" ಎಂದು ಆಕೆ ಕಾಲಿಗೆರಗಿದಳು. ನಾಚಿ ನಡುಗಿ ಕಣ್ಣೀರು ಸುರಿಸಿ ಅಳುತ್ತ ಕಾಲ ಮೇಲೆ ಕೆಡೆದಳು. ಉದಯನನು ಪ್ರೀತಿಯಿಂದ ಅವಳನ್ನು ಎತ್ತಿ ತಬ್ಬಿ ಕಣ್ಣೀರೊರಸಿ, ಹಿತ ನುಡಿದ ಸಮಾಧಾನವುಂಟುಮಾಡಿದನು. ದೂರ ನಿಂತ ಶಾಂಕಿಯ ತಾಯಿಯನ್ನು ನೋಡಿ ನಮಸ್ಕರಿಸಿ, "ತಾಯೇ, ನಿಮ್ಮ ಅನುಗ್ರಹ ದೊಡ್ಡದು. ಎಂದೋ ನಾನು ಮಾಡಿದ ಒಂದು ಸಣ್ಣ ಉಪಕಾರ ಆಲದ ಬೀಜವನ್ನು ಬಿತ್ತಿದ ಹಾಗೆ ದೊಡ್ಡದಾಗಿ ಬೆಳೆದು ಶುಭಫಲ ಕೊಟ್ಟಿತು" ಎಂದು ಉಪಚಾರ ಹೇಳಿ ಆದರಿಸಿದನು.

ಈ ಶುಭ ಸಮಾಚಾರ ತಟ್ಟನೆ ನಗರದಲ್ಲೆಲ್ಲ ಹರಡಿತು. ಗುಡಿತೋರಣಗಳಿಂದಲೂ ಚಪ್ಪರಗಳಿಂದಲೂ ನಗರ ಅಲಂಕಾರವಾಯಿತು. ಯೋಗಿಯ ಸಾಮರ್ಥ್ಯವನ್ನೂ ವಾಸವದತ್ತೆಯ ಮಹಾ ತ್ಯಾಗವನ್ನೂ ಕೊಂಡಾಡುತ್ತ ಪ್ರಜೆಯೆಲ್ಲ ಆನಂದಗೊಂಡು ನೆರೆದು ನಿಂತಿತು ಉದಯನ ವಾಸವದತ್ತೆ

ಯರು ತೀರ್ಥಜಲದಲ್ಲಿ ಮಿಂದು ಅಲಂಕರಿಸಿಕೊಂಡು ಪಂಚವರ್ಣದ ಪತಾಕೆಗಳಿಂದ ರಂಜಿಸುವ ಆನೆಯಂಬಾರಿಯಲ್ಲಿ ನಗರವನ್ನು ಪ್ರವೇಶಿಸಿದರು.

# ೪೦ ಏಳಿಗೆ

ವಾಸವದತ್ತೆ ಉದಯನನಿಗೆ ಪ್ರಾಣಪ್ರಿಯಳೆಂದು ಪದ್ಮಾವತಿಗೆ ಗೊತ್ತಿತ್ತು; ಅವಳ ಸ್ವಂತ ಸದ್ಗುಣಗಳನ್ನೂ ಕೇಳಿ ತಿಳಿದಿದ್ದಳು. ಅದರಿಂದ ಅವಳಲ್ಲಿ ಗೌರವ ಭಾವವುಂಟಾಗಿತ್ತು. ಈಗಿನ ಸಂದರ್ಭದಲ್ಲಿ ತನ್ನ ಕರ್ತವ್ಯವೇನೆಂದು ನಿಶ್ಚಯಿಸಿಕೊಂಡು ವಾಸವದತ್ತೆ ಒಬ್ಬಳೇ ಇದ್ದಾಗ ಹೋಗಿ ಅವಳನ್ನು ಕಂಡಳು. ಫಲಪುಷ್ಪ ಆಭರಣ ಮೊದಲಾದುವನ್ನು ಕಾಣಿಕೆಕೊಟ್ಟು ನಮಸ್ಕಾರ ಮಾಡಿದಳು. ವಾಸವದತ್ತೆಯೂ ಅವಳನ್ನು ಪ್ರೀತಿಯಿಂದ ಕೈ ಹಿಡಿದೆತ್ತಿ ತಬ್ಬಿ ಸಂತೋಷದಿಂದ ಮಾತಾಡಿಸಿದಳು. ಬಳಿಕ ಇಬ್ಬರೂ ಸರಸವಾಗಿ ಸಂಭಾಷಿಸುತ್ತ, ದಂತದ ಕಾಲಿನ ಮಂಚದ ಮೇಲೆ ಮೃದು ಹಾಸಿನಲ್ಲಿ ಹತ್ತಿ ಕುಳಿತು, ಒಂದು ತಾವರೆಯಲ್ಲಿ ನೆಲಸಿದ ಇಬ್ಬರು ಸಿರಿದೇವಿಯರಂತೆ ಪ್ರಕಾಶಿಸುತ್ತಿದ್ದರು.

ಅವರಿಬ್ಬರೂ ಹಾಗೆ ಹೊಂದಿಕೊಂಡು ಪ್ರೀತಿಯಿಂದಿರುವುದನ್ನು ಕಂಡು ಉದಯನನು ತೃಪ್ತಿ ಹೊಂದಿದನು. ರಾಣಿಯರಿಗೆ ಕೊಡತಕ್ಕ ವೃತ್ತಿಗಳನ್ನು ಇಬ್ಬರಿಗೂ ಕೊಟ್ಟು ತೃಪ್ತಿಪಡಿಸಿದನು. ದಾಸ ದಾಸಿಯರನ್ನೂ ಪರಿವಾರದವರನ್ನೂ ಇಬ್ಬರಿಗೂ ಹಂಚಿಕೊಟ್ಟನು. ಇಬ್ಬರು ದೇವಿಯರೂ ಸೇವಿಸುತ್ತಿರಲು ಪರಮಸಂತೋಷದಿಂದ ಹಲವೆಡೆಗಳಿಗೆ ಹೋಗಿ ಬರುತ್ತ ಆನಂದಿಸುತ್ತಿದ್ದನು.

ತನ್ನ ಪರಿವಾರದವರನ್ನೆಲ್ಲ ಆಸ್ಥಾನಕ್ಕೆ ಕರಸಿಕೊಂಡು ಅವರವರಿಗೆ ತಕ್ಕ ಬಹುಮಾನ ಕೊಟ್ಟು ಸಂತೋಷಪಡಿಸಿದನು. ರುಮಣ್ವಂತನಿಗೆ ಸೇನಾಪತಿ ಪಟ್ಟ ಕಟ್ಟಿದನು; ಪದ್ಮಾವತಿಯ ಗೆಳತಿಯೊಬ್ಬಳನ್ನು ಅವನಿಗೆ ಮದುವೆ ಮಾಡಿಸಿದನು; ಆಮೇಲೆ ಜಯಂತೀ ಲಾವಾಣಕ ನಗರಗಳನ್ನು ಅವನಿಗೆ ಕೊಟ್ಟು, ತಾನು ಕರಸಿದಾಗ ಬಂದು ಹೋಗುತ್ತಿರುವಂತೆ ಹೇಳಿ ಕಳಿಸಿಕೊಟ್ಟನು. ಯೂಗಿಗೆ ಮೊದಲಿನಂತೆಯೇ ಚೇದಿನಾಡಿನ ಅಧಿಕಾರವನ್ನು

ವಹಿಸಿದನು. ವೃಷಭಕ, ವಸಂತಕ, ಮೊದಲಾದ ಉಳಿದ ಗೆಳೆಯರಿಗೂ ಊರುಂಬಳಿಗಳನ್ನೂ ಇತರ ವರಮಾನಗಳನ್ನೂ ಕೊಟ್ಟು ತಣಿಸಿದನು. ವಸಂತಕನಿಗೆ ಸಾವಿರ ಹೊನ್ನು ವೇತನ ಗೊತ್ತುಮಾಡಿ, "ಯಾವಾಗಲೂ ನನ್ನೊಡನೆಯೆ ಇರು" ಎಂದು ಕಟ್ಟಳೆ ಮಾಡಿದನು. ಯೂಗಿಯನ್ನು ತನ್ನ ಬಳಿಯೇ ಇರುವಂತೆ ನಿಲ್ಲಿಸಿಕೊಂಡನು.

ಹೀಗೆ ನಾಡನ್ನೂ ಪರಿಜನರನ್ನೂ ತೃಪ್ತಿಪಡಿಸಿ ನಲಿಯುತ್ತಿರುವಲ್ಲಿ ಒಂದು ದಿನ ಪ್ರದ್ಯೋತನನ ಆಸ್ಥಾನದಿಂದ ದೂತರು ಬಂದರು. ಅವರು ಹಲವು ಅಪೂರ್ವ ವಸ್ತುಗಳನ್ನು ಕಾಣಿಕೆ ಕೊಟ್ಟು ಪ್ರದ್ಯೋತನನ ಶ್ರೀಮುಖವನ್ನು ಕೈಗೆ ನೀಡಿದರು. "ಪಾಂಚಾಲರಾಜನನ್ನು ನೀನು ಗೆದ್ದದ್ದನ್ನು ಕೇಳಿದೆನು. ನಾನು ಮಾಡಬೇಕಾದ್ದನ್ನು ನೀನು ಮಾಡಿದೆ. ಲೋಕ ನಿನ್ನ ಕೊಡೆನೆಳಲಲ್ಲಿ ತಂಗಿ ಸುಖಪಡುವ ಹಾಗೆ ಕಾಪಾಡು; ಕೀರ್ತಿಶಾಲಿಯಾಗಿ ಬಾಳು. ವಾಸವದತ್ತೆಯೊಡನೆ ನೀನು ಇಲ್ಲಿ ಬಂದು ನಮಗೆ ಸಂತೋಷವುಂಟುಮಾಡು" ಎಂದು ಅದರಲ್ಲಿ ಬರೆದಿತ್ತು. ಯೂಗಿಯನ್ನು ನೋಡಬಯಸಿ ಅವನನ್ನು ಬೇಗ ಕಳಿಸಿಕೊಡಬೇಕೆಂದು ಕೋರಿಕೆ ಸೂಚಿಸಿತ್ತು.

ವಾಸವದತ್ತೆ ಬೆಂಕಿಯಲ್ಲಿ ಬೆಂದದ್ದಾಗಲಿ ಮತ್ತೆ ಬದುಕಿ ಬಂದದ್ದಾಗಲಿ ಅದರಲ್ಲಿ ಪ್ರಸ್ತಾಪಿಸಿರಲಿಲ್ಲ. ಉದಯನನು ಇದೇಕೆಂದು ವಿಸ್ಮಯಪಡುತ್ತಿದ್ದನು. ಅದನ್ನರಿತ ದೂತರು ತಮ್ಮರಸನಿಗೆ ಮುನಿಗಳೊಬ್ಬರು ವಾಸವದತ್ತೆ ಸತ್ತದ್ದು ಸುಳ್ಳೆಂದು ಹೇಳಿ, ಅವಳು ಮರೆಯಿಂದ ಹೊರಬರುವ ಕಾಲ ಇಂಥದೆಂದು ನಿರ್ದೇಶಪಡಿಸಿದ್ದರೆಂದು ತಿಳಿಸಿದರು. ಉದಯನನು ಅವರಿಗೆಲ್ಲ ತಕ್ಕಂತೆ ಮರ್ಯಾದೆ ಮಾಡಿ ಉಪಚರಿಸಿದನು.

ಬಳಿಕ ಅತ್ತೆ ಮಾವಂದಿರಿಗೂ, ಗೋಪಾಲಕ ಮೊದಲಾದ ರಾಜಕುಮಾರರಿಗೂ, ಶ್ವೇತ ಮೊದಲಾದ ಮಂತ್ರಿಗಳಿಗೂ ಆನೆ, ಕುದುರೆ, ತೇರು, ಉಡಿಗೆ ತೊಡಿಗೆ ಮೊದಲಾದ ಬಗೆಬಗೆಯ ಉಡುಗೊರೆಗಳನ್ನು ಕೊಟ್ಟು ಕಳಿಸಿದನು. ಪ್ರದ್ಯೋತನನ ಇಷ್ಟದಂತೆ ಪರಿವಾರ ಸಮೇತ ಯೂಗಿಯನ್ನು ಉಜ್ಜಯಿನಿಗೆ ಪ್ರಯಾಣ ಮಾಡಿಸಿದನು. "ಇನ್ನು ಮೇಲೆ ನಮ್ಮೆರಡು ಕುಲಗಳಿಗೂ ಕಲಹವಿರಬಾರದು. ಎಂದು ಕಡೆಯುವರೂ ಮನಕಲೆತು

ನಡೆಯುವಂತೆ ಮಾಡಿಸಿ" ಎಂದು ಕೋರಿ ಓಲೆ ಬರೆದು ಕೊಟ್ಟು ಯೂಗಿಯನ್ನು ತನ್ನದೊಂದು ರಕ್ಷಕ ದಳದೊಡನೆ ಕಳಿಸಿಕೊಟ್ಟನು.

ಲಾವಾಣದ ಅಡವಿಯಲ್ಲಿ ಮಾಲೆ ಕಟ್ಟಿಕೊಟ್ಟಿದ್ದ ವಿರಚಿಕೆಯೊಬ್ಬಳು, ಆರುಣಿಯ ಸೆರೆಯಲ್ಲಿದ್ದು ಆ ಮೇಲೆ ತನ್ನ ಕೈಗೆ ಬಂದ ಕಾಶೀರಾಜನ ಮಗಳು ವಾಸವದತ್ತೆಯೆಂಬುವಳೊಬ್ಬಳು — ಹೀಗೆ ಮತ್ತಿಬ್ಬರು ಚೆಲುವೆಯರನ್ನು ಉದಯನನು ಮದುವೆಯಾದನು. ನಾಲ್ವರರಸಿಯರೂ ಪ್ರೀತಿಪರವಶರಾಗಿ ಸೇವಿಸುತ್ತಿದ್ದರು.

ಕಾಲಕ್ರಮದಲ್ಲಿ ವಾಸವದತ್ತೆಯಲ್ಲಿ ನರವಾಹನದತ್ತನೆಂಬ ಮಗನೂ ಪದ್ಮಾವತಿಯಲ್ಲಿ ಗೋಮುಖನೆಂಬ ಮಗನೂ ಹುಟ್ಟಿದರು. ಪ್ರಾಯಕ್ಕೆ ಬಂದ ಮೇಲೆ ನರವಾಹನದತ್ತನು ತನ್ನ ಪುಣ್ಯದ ಬಲದಿಂದ ವಿದ್ಯಾಧರ ಚಕ್ರವರ್ತಿಯಾದನು.

ಉದಯನನು ಹಲವು ವರ್ಷ ಕಾಲ ಸುಖದಿಂದ ರಾಜ್ಯಭಾರ ಮಾಡುತ್ತಿದ್ದನು. ಕೊನೆಗೆ ವೈರಾಗ್ಯ ಹೊಂದಿ ರಾಜ್ಯವನ್ನು ಮಗ ಗೋಮುಖನಿಗೆ ವಹಿಸಿಕೊಟ್ಟು ಪತ್ನಿಯರೊಡನೆ ತಪಸ್ಸಿಗೆ ತೆರಳಿದನು. ತಪೋವನದಲ್ಲಿ ಉಗ್ರ ತಪಸ್ಸು ಮಾಡಿ ಪುಣ್ಯಬಲದಿಂದ ಮೇಲಾದ ಶ್ರೇಯಸ್ಸನ್ನು ಸಾಧಿಸಿದನು.

---

# ಅರ್ಥಕೋಶ

---

ಅ

ಅಟ್ಟು – ಓಡಿಸು, ಕಳಿಸು
ಅಡಸು – (ಅಡ್ಡಿಯಾಗಿ) ಬರು
ಅಡಿಗಳೇ – ಒಡೆಯರೇ ; ಸ್ವಾಮಿ
(ಗೌರವದ ಸಂಬೋಧನೆ)
ಅಣೆ – ಅಡ್ಡಕಟ್ಟೆ ; ಏರಿ
ಅನುನಯ – ಒಳ್ಳೆಯ ಮಾತು ;
ಸಮಾಧಾನ
ಅಬ್ಬಿ - ಬೆಟ್ಟದ ಝರಿ ; ಸಣ್ಣ ಹಳ್ಳ
ಅಂಬು–ಬಾಣ
ಅರಣ್ಯರೋದನ–ವ್ಯರ್ಥವಾದ
ಗೋಳಾಟ; ಸಾರ್ಥಕವಿಲ್ಲದ ಶ್ರಮ
ಅರಸಾಳ್ಕೆ–ದೊರೆಯಾಗಿ ಆಳುವುದು;
ದೊರೆತನ; ರಾಜ್ಯಭಾರ
ಅರಿಕೆಮಾಡು–ತಿಳಿಯಪಡಿಸು ;
ಹೇಳಿಕೊ
ಅರುಮೆ–ಬಹು ಅಪರೂಪವೂ ಪಡೆ
ಯಲಸಾಧ್ಯವೂ ಆದ ; ದುರ್ಲಭ
ಅಲವತ್ತುಕೊ–ಬಗೆಬಗೆಯಾಗಿ
ಗೋಳಾಡಿ ಹಂಬಲಿಸು
ಅವಗಣಿಸು–ಕೀಳಾಗಿ ಕಾಣು ;
ಗಮನಿಸದಿರು

ಆ

ಆಡು–ನರ್ತಿಸು ; ನಾಟ್ಯಮಾಡು
ಆಯಕಟ್ಟಿನ (ಸ್ಥಳ)–ರಕ್ಷಣೆಗೆ
ತುಂಬ ಅನುಕೂಲವಾದ
ಆಲಿಸು–ಕೇಳು

ಇ

ಇಂಗಿತ–ಮನಸ್ಸಿನಲ್ಲಿರುವುದು ;
ಸ್ಪಷ್ಟವಾಗಿ ಹೊರಪಡಿಸದ
ಮನೋಭಾವ
ಇನಿ–ಸವಿಯಾದ ; ಸಿಹಿಯಾದ

ಉ

ಉಚ್ಚಾಟನ ಮಂತ್ರ–(ಪಿಶಾಚಿ
ಮುಂತಾದವನ್ನು) ಓಡಿಸುವ
ಮಂತ್ರ
ಉಂಬಳಿ–ವಂಶಪಾರಂಪರ್ಯವಾಗಿ
ಅನುಭವಿಸುವಂತೆ ಕೊಟ್ಟ ಊರು
ಮುಂತಾದ್ದು
ಉರು } – ಶ್ರೇಷ್ಠವಾದ
ಉರೆ }
ಉಸಿರು–ಪ್ರಾಣ
(ಉಸಿರೂರೆ–ಪ್ರಾಣಾಧಾರ)

ಊ

ಊರೆ–ಆಧಾರ ; ಆಶ್ರಯ
ಊಳಿಗ–ಜೀತ ; ಸೇವೆ

ಊಳಿಗದವರು - ಸೇವಕರು

ಎ

ಎಡೆ - ಸ್ಥಳ

ಎಣಿಕೆ - ಮನಸ್ಸಿನಲ್ಲಿ ಯೋಚಿಸಿದ್ದು; ಭಾವನೆ

ಎಳವೆ - ಚಿಕ್ಕ ವಯಸ್ಸು

ಒ

ಒಡಲು - ಮೈ ; ಶರೀರ

ಒನಕೆ ಹಾಡು - ಕುಟ್ಟುವಾಗ ಹೇಳುವ ಹಾಡು

ಒಲವು - ಪ್ರೀತಿ

ಓ

ಓಲೆ - ಕಾಗದ; ಪತ್ರ; ಲೇಖನ

ಕ

ಕಟ್ಟುವಲೆ - ಕಟ್ಟಿದ ಬೆಟ್ಟ ; ಕೃತಕ ಪರ್ವತ (ಮಾಡುಬೆಟ್ಟ)

ಕಣಿ - ಮುಂದಾಗುವುದನ್ನು ಕಂಡು ಹೇಳುವುದು ; ಭವಿಷ್ಯಗಾತಿ-ಭವಿಷ್ಯ ಹೇಳುವವಳು

ಕಣೆ - ಬಾಣ

ಕಂಪು - ಸುವಾಸನೆ; ಪರಿಮಳ

ಕಮ್ಮೆಣ್ಣೆ - ಸುವಾಸನೆಯ ಎಣ್ಣೆ ; ಪರಿಮಳ ತೈಲ

ಕರಗ - ಗಡಿಗೆ

ಕರೆ - ಕರೆಯುವುದು ; ಆಹ್ವಾನ ದಡ; ತೀರ

ಕರೆವಾವು - ಹಾಲು ಕರೆಯುತ್ತಿರುವ ಹಸು : ಕರಾವು (ಕರೆವ+ಆವು)

ಕಾಣ್ಕೆ - ಕಾಣಿಸುವ ರೀತಿ; ಆಕಾರ; ಗೌರವಾರ್ಥವಾಗಿ ಕೊಡುವ ವಸ್ತು (ಕೈಗಾಣಿಕೆ)

ಕಾಪು - ಕಾವಲು; ರಕ್ಷಣೆ

ಕಾಲ - (ನೂರು -)- ವರ್ಷ

ಕಿರಿಮೆ - ಕಿರಿಯತನ ; ಸಣ್ಣತನ ; ಕೀಳುಸ್ಥಿತಿ

ಕಿರು - ಚಿಕ್ಕ

ಕಿರು ಗೋಟೆ - ಸಣ್ಣ ಗೋಟೆ

ಕಿರು ಹರೆಯ - ಎಳೆಯ ಪ್ರಾಯ

ಕುಂಜರಕೇರಿ - ಆನೆ ಬೀದಿ

ಕೂರಂಬು - ಹರಿತವಾದ ಬಾಣ

ಕೆಟ್ಟಾಳಿಕೆ | ಕೆಟ್ಟಾಳ್ಕೆ | - ದುಷ್ಟರಾಜ್ಯಭಾರ ; ದುರಾಡಳಿತ; ದಬ್ಬಾಳಿಕೆ

ಕೆಡೆ - ಬೀಳು

ಕೆಳನೀರು - ನೆಲದೊಳಗೆ ಅಡಗಿ ಮರೆಯಾಗಿರುವ ನೀರು

ಕೈಯೆಡೆ - ಇದರ ರಕ್ಷಣೆ ನಿಮಗೆ ಸೇರಿದ್ದೆಂದು ಒಬ್ಬರ ಕೈಗೆ ಒಪ್ಪಿಸಿ ಕೊಟ್ಟದ್ದು

ಕೊರೆಯಾಗು (ಅಂಗ)- ಕಡಮೆ ಯಾಗಿರು, ಇಲ್ಲವಾಗಿರು ; ಊನವಾಗಿರು, ಹೀನವಾಗಿರು

ಕೊಳುಕೊಡೆ - ಹೆಣ್ಣು ಕೊಟ್ಟು ತರುವುದು; ಸಂಬಂಧ ಬೆಳಸುವುದು

ಗ

ಗಣಕ - ಲೆಕ್ಕಮಾಡುವವನು, ಜೋಯಿಸ

ಗಾಂಧರ್ವ ವಿವಾಹ - ಪರಸ್ಪರ ಮೆಚ್ಚಿಗೆಯಿಂದ ಮಾಲೆ ಹಾಕಿ ಮಾಡಿಕೊಳ್ಳುವ ಮದುವೆ
ಗುಡಿ - ದೇವಸ್ಥಾನ, ಬಾವುಟ
ಗೆಲು ಬಾಗಿಲು - ಗೆದ್ದ ನೆನಪಿಗಾಗಿ ಇಡುವ ಬಾಗಿಲು; ವಿಜಯದ್ವಾರ

ಚ

ಚಂದನ - ಶ್ರೀಗಂಧ

ಜ

ಜಾಡು - ನಡೆದು ಗುರುತಾದ ದಾರಿ; ಸುಳಿವು

ತ

ತಣಿ - ತಣ್ಣಗಾಗು; ತಗ್ಗು
ತನಿ - ಒಂಟಿ; ಒಂದೇ ಒಂದಾದ; ಪ್ರತ್ಯೇಕವಾದ
ತನಿಯೆಡೆ - ಪ್ರತ್ಯೇಕ ಸ್ಥಳ
ತಂತ್ರ - ನಿರ್ವಾಹಕ್ರಮ, ಉಪಾಯ
ತಳಿರು - ಚಿಗುರು
ತೊಗಲ ಹಗ್ಗ - ಚರ್ಮದ ಹಗ್ಗ; ಮಿಣಿ
ತೊರೆ - ಬಿಡು
ತೊರೆಹ - ಬಿಟ್ಟುಬಿಡುವುದು; ವೈರಾಗ್ಯ

ದ

ದೀವ (ಜಂಬು-)- ದ್ವೀಪ
ದುಂದುಭಿ-(ಒಂದು ಬಗೆಯ) ನಗಾರಿ
ದೊಣೆ - ಬೆಟ್ಟದಲ್ಲಿ ಬಂಡೆಗಳ ನಡುವೆ ನೀರು ದೊರೆಯುವ ಸ್ಥಳ

ನ

ನಗರನೋಟದ - ಪಟ್ಟಣವನ್ನು ನೋಡುವುದಕ್ಕಾಗಿ ಮಾಡಿರುವ
ನಡೆಮುಡಿ - ನಡೆಯುವಾಗ ಗೌರವಕ್ಕಾಗಿ ಕಾಲಡಿಗೆ ಹಾಸುವ ಬಟ್ಟೆ
ನನಸು - ಎಚ್ಚರ (ವಾಗಿರುವ ಕಾಲ)
ನರು - ಸುವಾಸನೆಯ; ಪರಿಮಳದ
ನರುಗಂಪು - ಪರಿಮಳ ವಾಸನೆ
ನರುನೀರು - ಸುವಾಸನೆಯ ನೀರು
ನಲ್ - ಒಳ್ಳೆಯ
ನಲವು - ಸಂತೋಷ
ನಲಿ - ಸಂತೋಷಿಸು
ನಲ್ನೆಲೆಯ - ಒಳ್ಳೆಯ ಸ್ಥಳದಲ್ಲಿರುವ; ಶಾಶ್ವತವಾದ
ನಲ್ಲನ - ಪ್ರಿಯನ
ನಲ್ಲವಳ - ಒಳ್ಳೆಯವಳ
ನಲ್ಲಾಳ್ಕೆ (ನಲ್+ಆಳ್ಕೆ)-ಒಳ್ಳೆಯ ರಾಜ್ಯಭಾರ; ಸುರಾಜ್ಯ
ನವೆ - ಕಷ್ಟಪಟ್ಟು ಕೃಶವಾಗು
ನಾರಾಚ - ಬಾಣ
ನಾರಿ - ಬಿಲ್ಲಿನ ಹುರಿ; ಹೆದೆ
ನಿಡು - ಉದ್ದವಾದ; ದೀರ್ಘ
ನಿಡುಗಾಲ - ಬಹುಕಾಲ, ದೀರ್ಘಕಾಲ

ನಿಡುಮಲೆ – ಎತ್ತರವಾದ ಪರ್ವತ
ನಿಲುವು – ನಿಂತ ರೀತಿ ; ಆ ವಿಷಯದಲ್ಲಿ ಅವನ ಸ್ಥಿತಿಯೇನು ಎಂಬುದು ; ಮನೋಭಾವ
ನೀರಾಟ – ಸ್ನಾನಮಾಡುವುದು, ಈಜುವುದು, ಜಲಕೇಳಿ
ನೀರ್ನೆಲೆ – ನೀರಿರುವ ಸ್ಥಳ; ಕೊಳ ಬಾವಿ, ಹೊಳೆ ಮೊದಲಾದ್ದು
ನೀರ್ಬೀಳು – ಜಲಪಾತ
ನೆಚ್ಚು – ನಂಬಿಕೆ ; ಭರವಸೆ
ನೆತ್ತರು ಕೊಡಗೆ – ಯುದ್ಧದಲ್ಲಿ ರಕ್ತ ಬಸಿದು ಸೇವೆಮಾಡಿದಕ್ಕಾಗಿ ಕೊಡುವ ಹೊಲ ಗದ್ದೆ ಮೊದಲಾದ್ದು
ನೆಮ್ಮು – ಆಶ್ರಯಿಸಿ
ನೆಲೆ – ಸನ್ನಿವೇಶ ; ಸ್ಥಿತಿ ; ಸ್ಥಳ (ನೆಲೆಕಲುಕು ; ನೆಲೆಗೆಡು ; ನೆಲೆಮನೆ)
ನೆರವು – ಸಹಾಯ
ನೋನ್ – ವ್ರತಮಾಡು
ನೋಂತು – ವ್ರತಹಿಡಿದು : ತಪಸ್ಸುಮಾಡಿ
ನೋಂಪಿ – ವ್ರತ ; ತಪಸ್ಸು

## ಪ

ಪಟಮಾಡ – ಬಟ್ಟೆಯ ಮನೆ ; ಗುಡಾರ : ಡೇರಾ
ಪಟ್ಟೆ – ರೇಷ್ಮೆ
ಪಡೆ – ದಂಡು ; ಸೈನ್ಯ
ಪಾಡಗ – ಒಂದು ಬಗೆಯ ಕಾಲಂದುಗೆ
ಪಿಡಿ – ಹೆಣ್ಣಾನೆ
ಪುಷ್ಕರಿಣಿ – ತಾವರೆಯ ಕೊಳ
ಪೂಸು – ಬಳಿದುಕೊ ; ತೊಡೆದುಕೊ
ಪ್ರಯೋಗ-ಸಿದ್ಧಾಂತ ಸೂತ್ರಗಳನ್ನು ಕಾರ್ಯದಲ್ಲಿ ಹೊಂದಿಸಿ ನಡಸುವುದು ; ಮಾಡಿತೋರಿಸುವುದು

## ಬ

ಬರವು – ಬರುವಿಕೆ ; ಆಗಮನ
ಬಲವರು–ಒಂದು ವಸ್ತು ಸದಾ ತನ್ನ ಬಲಗಡೆಗೇ ಇರುವಂತೆ ಅದನ್ನು ಸುತ್ತಿಬರು ; ಪ್ರದಕ್ಷಿಣೆಮಾಡು
ಬಲ್ಮೆ – ಶಕ್ತಿ (ಪ್ರಯೋಗ) ; ಬಲಾತ್ಕಾರ
ಬಾಣಸಿಗ – ಅಡಿಗೆಯವನು
ಬಾಷ್ಪ – ಕಣ್ಣೀರು
ಬಾಳ್ಗೆ – ಬಾಳಲಿ : ಬದುಕಿರಲಿ
ಬಾಳ್ಗೆಟ್ಟು – ಜೀವನ ಹಾಳಾಗಿ
ಬಿಡದಿ – ಇಳಿದುಕೊಂಡಿರುವ ಸ್ಥಳ; ಬೀಡು
ಬೀಳ್ಕೊಳ್ – ಹೋಗಿ ಬರುವುದಾಗಿ ಹೇಳಿ ಅಪ್ಪಣೆ ಪಡೆದುಕೊ
ಬೆಂಬನಿ – ಬೇಯುವ ಹನಿ ; ಬಿಸಿಯಾದ ಕಣ್ಣೀರು
ಬೆಳಗು – ಬೆಳಗ್ಗೆ ; ಪ್ರಾತಃಕಾಲ
ಬೆಳ್ – ಬಿಳುಪು

ಬೆಳ್ಗೊಡೆ- ಬಿಳಿಯ ಛತ್ರಿ
ಬೆಳ್ದಾವರೆ-ಬಿಳಿಯ ತಾವರೆ
ಬೆಳ್ಳಿ-ಶುಕ್ರ (ನಕ್ಷತ್ರ)
ಬೆಳ್ಪುಡೆ- ಬಿಳಿಯ ಬಟ್ಟೆ
ಬೇಹಿನವರು-ಗೂಢಚಾರರು
ಬೈಗು-ಸಂಜೆ; ಸಾಯಂಕಾಲ

ಮ

ಮಚ್ಚು-ಮೇಲುಗಡೆ ಮರೆಯಿಲ್ಲದ ಮಾಳಿಗೆ (ಬಿಸಿಲು ಮಚ್ಚು, ಬೆಳುದಿಂಗಳ ಮಚ್ಚು, ಮೇಲ್ಮಚ್ಚು)
ಮಜಲು-ಪ್ರಯಾಣದಲ್ಲಿ ಒಂದು ಸಲ ಹೊರಟು ಹೋಗಿ ತಂಗುವುದು: ಅಂಥ ಒಂದು ಘಟ್ಟ
ಮನವರಿಕೆಯಾಗು,-ಮಾಡು-ಮನಸ್ಸಿಗೆ ಚೆನ್ನಾಗಿ ತಿಳಿಯುವಂತೆ ಆಗು,-ಮಾಡು
ಮರುನುಡಿ-ಪ್ರತಿಯಾಗಿ ಹೇಳು, ಉತ್ತರಕೊಡು
ಮಲರು-ಹೂವು
ಮಲೆ-ಬೆಟ್ಟ (ಮಲೆನಾಡು)
ಮಾಡ-ಮನೆ, ಮಹಡಿಯ ಮನೆ (ಹುಲಿಮುಖ ಮಾಡ-ಹುಲಿಯ ಮುಖವನ್ನು ಇಟ್ಟು ಅಲಂಕರಿಸಿರುವ ಅರಮನೆಯ ಗೋಪುರ?)
ಮಾಡುಬೆಟ್ಟ-ಕಟ್ಟುಮಲೆ
ಮಾರುವೇಷ-ಬೇರೊಂದು ವೇಷ
ಮಾಸು-ಕಳಂಕ, ದೋಷ
ಮಿಂಯುವುದಕ್ಕೆ-ಸ್ನಾನಮಾಡುವುದಕ್ಕೆ
ಮಿಂಹ-ಸ್ನಾನ
ಮುಕ್ಕೊಡೆಗಳು-ಮೂರು ಕೊಡೆಗಳು
ಮುಗುಳು-ಮೊಗ್ಗು
ಮೇಲ್ಮಾಡ-ಮೇಲುಗಡೆಯ ಮಹಡಿ, ಕೋಣೆ
ಮೈಯುಂಡು ಹೋಗಿರು-ಬಿಡಲಾಗದಷ್ಟು ಸ್ವಾಭಾವಿಕವಾಗಿ ಬಿಟ್ಟಿರು, ರಕ್ತಗತವಾಗಿ
ಮೊಳಗು-ದೊಡ್ಡ ಸದ್ದು
ಮೊಳಗೆಬ್ಬಿಸು, ಮೊಳಗಿಸು } ಸದ್ದು ಮಾಡು

ವ

ವೃತ್ತಿ-ಉದ್ಯೋಗ, ಜೀವನ ಸಾಧನಗಳು, ಭೂಮಿಕಾಣಿ ಮುಂತಾದ್ದು

ಶ

ಶಿಬಿಕೆ-ಪಲ್ಲಕ್ಕಿ
ಶುಶ್ರೂಷೆ-ಉಪಚಾರ; ಸೇವೆ
ಶ್ರೀಮುಖ-ಗುರುಹಿರಿಯರಿಂದ ಬಂದ ಕಾಗದ, ನಿರೂಪ

ಸ

ಸಂಘರಾಜರು-ಒಂದುಗೂಡಿ ಕೂಟ ಕಟ್ಟಿಕೊಂಡು ಬಂದ ರಾಜರು
ಸಂಚಾರ-(ಇಲ್ಲಿ) ನಾಶವಾಗುವ ಸಂಭವ; ಅಪಾಯ

ಸಂಚು–ಪಿತೂರಿ
ಸಜ್ಜು–ಜೀನು, ಸಬರ, ಕಡಿವಾಣ ಮುಂತಾದ ಸಹಾಯಕ ಸಲಕರಣೆಗಳು
ಸನ್ನೆ–ಸಂಜ್ಞೆ
ಸರಿದೊರೆ–ಸರಿಸಮಾನ
ಸಹಪಾಠಿ–ಜೊತೆಯಲ್ಲಿ ಓದುವವನು
ಸಾಮ–ಒಳ್ಳೆಯ ಮಾತು, ಶಾಂತಿ ಮಾರ್ಗ
ಸಿರಿದೇವಿ–ಶ್ರೀದೇವಿ, ಲಕ್ಷ್ಮಿ
ಸಿವಿಗೆ–ಶಿಬಿಗೆ, ಪಲ್ಲಕ್ಕಿ
ಸುವ್ವಿಹಾಡು–ಕುಟ್ಟುವಾಗ ಹೇಳುವ 'ಸುವ್ವಿ, ಸುವ್ವಿ' ಎಂದು ಪಲ್ಲವಿ ನುಡಿಯುತ್ತ ಹಾಡುವ ಹಾಡು
ಸೂಸು–ತುಂಬಿತುಳುಕುತ್ತಿರು, ಹೊರಚೆಲ್ಲುತ್ತಿರು
ಸೆಜ್ಜೆಮನೆ–ಮಲಗುವ ಮನೆ (ಸೆಜ್ಜೆ–ಶಯ್ಯಾ)

ಹ

ಹರಣ–ಎತ್ತಿಕೊಂಡು ಹೋಗುವುದು
ಹಗೆ–ಶತ್ರು
ಹಗೆದೊರೆ–ಶತ್ರುರಾಜ
ಹಗೆಪಡೆ–ಶತ್ರುಸೈನ್ಯ
ಹಂಚಿಕೆ–ಮೊದಲೇ ಯೋಚಿಸಿ ಗೊತ್ತುಮಾಡಿದ್ದು, ಯೋಜನೆ
ಹಠಾತ್, ಹಠಾತ್ತನೆ–ಇದ್ದಕ್ಕಿದ್ದಂತೆ, ತಟಕ್ಕನೆ
ಹರಿಕಾರ–ಸುದ್ದಿ ತರುವ ದೂತ
ಹರೆ–ಬಿರುದನಿಯ ಒಂದು ವಾದ್ಯ
ಹಿಡಿಸಲಿಲ್ಲ–ಮನಸ್ಸಿಗೆ ಸರಿದೋರಲಿಲ್ಲ; ಒಪ್ಪಿತವಾಗಲಿಲ್ಲ
ಹುದಿ–ಒಳಗೆ ಅಡಗಿಸಿಕೊ
ಹುಸಿನೆಲ–ಒಳಗೆ ಟೊಳ್ಳಾದ ನೆಲ; ಕುಸಿಯುವ ನೆಲ
ಹೆಡತಲೆ–ಕುತ್ತಿಗೆಯ ಹಿಂಭಾಗ; ಹೆಕ್ಕತ್ತು
ಹೆಬ್ಬೊಗೆ–ದೊಡ್ಡ ಹೊಗೆ
ಹೊಕ್ಕು ಬಳಸಿ ನಡೆ–ಹೋಗಿ ಬಂದು ಕೂಡಿ ನಡೆಯುತ್ತಿರು; ಪರಸ್ಪರ ವ್ಯವಹಾರ ಇಟ್ಟುಕೊಂಡಿರು
ಹೊಗು; ಹೊಗಿಸು–ಪ್ರವೇಶ ಮಾಡು; –ಮಾಡಿಸು
ಹೊನಲು–ಪ್ರವಾಹ
ಹೊನ್ನ ಸಿಡುಮಲೆ–ಚಿನ್ನದ ಎತ್ತರವಾದ ಬೆಟ್ಟ; ಮೇರು ಪರ್ವತ
ಹೊನ್ನು (ಕೊಟ್ಟು)–ಚಿನ್ನದ ನಾಣ್ಯ
ಹೊಮ್ಮುತ್ತಿರು–ಉಕ್ಕುತ್ತಿರು

# ಟಿಪ್ಪಣಿಗಳು

೧ ಅವರ ಕಿವಿಯಲ್ಲಿ **ಪಂಚಮಂತ್ರ**ವನ್ನುಸುರಿ (ಪುಟ ೪೦)

**ಜಿನಾಲಯಗಳಲ್ಲಿ** ಪೂಜೋತ್ಸವಗಳೂ........ನಡೆಯ ತೊಡಗಿದವು (ಪುಟ ೪೮)

**ಮುಕ್ಕೊಡೆಗಳ** ಕೆಳಗೆ ಬೆಳಗುವ **ಅರ್ಹದೇವನನ್ನು** ದರ್ಶನ ಮಾಡಿದನು (ಪುಟ ೪೯)

'ಪೆರುಜ್ಞಾತ್ರಿ' ಪ್ರಕಾರ ಉದಯನ, ಪ್ರದ್ಯೋತನ ಮೊದಲಾದವರೆಲ್ಲ ಜೈನರು. ಆದ್ದರಿಂದ ಉದಯನನು ಮುದುಪೆಯ ಕಾಲದಲ್ಲಿ ಜಿನಾಲಯಕ್ಕೆ ಹೋಗಿ ಪ್ರಾರ್ಥಿಸಿದನು.

'ಜಿನ ಎಂದರೆ ಗೆದ್ದವನು ಎಂದರ್ಥ; ಕಾಮವನ್ನು ಗೆದ್ದು ಕರ್ಮ ಬಂಧನವನ್ನು ಕಡಿದು ಮುಕ್ತನಾದವನು. ಕರ್ಮದ ಕಟ್ಟನ್ನು ಕತ್ತರಿಸಿದವನಿಗೆ ಕೇವಲ ಜ್ಞಾನವೆಂಬ ಸರ್ವೋತ್ತಮವಾದ ಜ್ಞಾನ ದೊರೆಯುತ್ತದೆ: ಅಂಥ ಜ್ಞಾನವನ್ನು ಪಡೆದವನೇ "ಅರ್ಹತ್. ಅರ್ಹ". ಲೋಕವನು ಅನುಗ್ರಹಿಸಲು ಧರ್ಮಬೋಧೆ ಮಾಡುವ ಈ ಅರ್ಹನನ್ನೇ ಜೈನರು ದೇವರೆಂದು ಪೂಜಿಸುವುದು. ಜಿನನು ಬೋಧಿಸಿದ್ದು ಜೈನಮತ.

ಜಿನನ ತಲೆಯ ಮೇಲೆ ಒಂದರ ಮೇಲೊಂದರಂತೆ ಮೂರು ಕೊಡೆಗಳು ನೆರಳು ಮಾಡುತ್ತಿರುವುವೆಂದು ಪುರಾಣದ ವಿವರಣೆ.

ಅರ್ಹತ್, ಸಿದ್ಧ, ಆಚಾರ್ಯ. ಉಪಾಧ್ಯಾಯ. ಸರ್ವಸಾಧುಗಳು— ಎಂಬ ಈ ಐವರನ್ನೂ ನಮಸ್ಕರಿಸುವ ಮಂತ್ರಕ್ಕೆ ಪಂಚನಮಸ್ಕಾರ ಮಂತ್ರ ವೆಂದು ಹೆಸರು. ಇದೇ ಪಂಚಮಂತ್ರ. ಇದನ್ನು ಜಪಿಸುವವರಿಗೆ ಸಮಸ್ತ ಶ್ರೇಯಸ್ಸೂ ಲಭಿಸುತ್ತದೆ. ಇದನ್ನು ಜೈನರ 'ಗಾಯತ್ರಿ' ಎನ್ನಬಹುದು.

೨ "ವತ್ಸನನ್ ಬಾಳ್ಕೆ! ಉದಯನನ್ ಬಾಳ್ಗೆ" (ಪುಟ ೭೬)

"ವತ್ಸರಾಜನು ಬಾಳಲಿ: ಉದಯನನು ಬಾಳಲಿ". **ವತ್ಸವನ್,**

**ಉದಯನನ್**—ಎಂಬಲ್ಲಿ 'ಅನ್' ಪ್ರಥಮಾ ವಿಭಕ್ತಿ ಪ್ರತ್ಯಯ. ಇದು ಹಳಗನ್ನಡದಲ್ಲಿ 'ಅಂ' ಎಂದೂ ಹೊಸಗನ್ನಡದಲ್ಲಿ 'ಉ'ಕಾರ ಸೇರಿ 'ಅನು' ಎಂದೂ ಆಗಿದೆ.

ಶಾಸನಗಳಲ್ಲಿ "ಮುನಿವರನ್ ದೇವಲೋಕಕ್ಕೆ ಸಂದಾನ್" ಎಂಬಂತೆ 'ಆನ್' ಪ್ರಯೋಗವೂ ಇದೆ. ಈ ಕಾರಣದಿಂದ ಈ ಹಳೆಯ ರೂಪವನ್ನು ಇಲ್ಲಿ ಬಳಸಿಲ್ಲ. ಯುದ್ಧಘೋಷಣೆಗೆ ಈ ರೂಪ ಹೆಚ್ಚಾಗಿ ಹೊಂದುತ್ತದೆಯೆಂದು ಭಾವಿಸಿ, ಮೂಲ ರೂಪವನ್ನು ಉಳಿಸಿಕೊಂಡಿದೆ.

೩ "ಎತ್ತುಗಳಿಲ್ಲದೆ ಯಂತ್ರದಿಂದ ಮುಂದೆ ಸಾಗುವ ಬಂಡಿಯೊಂದನ್ನು ಮಾಡಿಸಿಕೊಂಡನು" (ಪುಟ ೫೧).

ಇದು ಈಗಿನ ಮೋಟಾರ್ ಬಂಡಿಯನ್ನು ನೆನಪಿಗೆ ತರುತ್ತದೆ. ಎರಡು ಸಾವಿರ ವರ್ಷಗಳಿಗೂ ಹಿಂದೆ ನಮ್ಮ ದೇಶದಲ್ಲಿ ಜನಕ್ಕೆ 'ಎತ್ತುಗಳಿಲ್ಲದೆ ನಡೆಯುವ ಬಂಡಿ'ಯನ್ನು ನಿರ್ಮಿಸಬೇಕೆಂಬ ಯೋಚನೆ ಬಂದಿತ್ತೆಂಬುದಕ್ಕೆ ಇದು ಸಾಕ್ಷಿ.

ಯೂಗಿಗೆ ಇದನ್ನು ಮಾಡಿಕೊಟ್ಟವನು 'ಯವನ ಬೀದಿಯ ನಾಯಕ' ನಂತೆ. ಯವನರೆಂದರೆ ಗ್ರೀಕರು. ಮಹಾಸೇನನ ಸೈನ್ಯದಲ್ಲಿ ಗ್ರೀಕರೂ ಇದ್ದಿರಬಹುದು.

೪ "ಕಬ್ಬಿಣವನ್ನು ಇಲಿ ನುಂಗಿತು; ಕೂಸನ್ನು ಹದ್ದು ಎತ್ತಿಕೊಂಡು ಹೋಯಿತು", "ವಂಚನೆ ಮಾಡಿದವನನ್ನು ವಂಚನೆಯಿಂದಲೆ ಗೆಲ್ಲಬೇಕು" (ಪು. ೧೨).

ಇದೊಂದು ಹಳೆಯ ಕಥೆ: ಒಬ್ಬ ವರ್ತಕನು ತನ್ನಲ್ಲಿದ್ದ ಕಬ್ಬಿಣದ ಸಾಮಾನುಗಳನ್ನು ತನ್ನ ಸ್ನೇಹಿತನ ವಶಕ್ಕೆ ಕೊಟ್ಟು ಬೇರೆ ದೇಶಕ್ಕೆ ಹೋಗಿದ್ದನಂತೆ. ಹಿಂದಿರುಗಿ ಬಂದು ಕೇಳಿದಾಗ ಆ ಗೆಳೆಯನು ಅವನ್ನೆಲ್ಲಾ ತಾನೇ ದಕ್ಕುಹಾಕಿಕೊಳ್ಳಬೇಕೆಂದು ಯೋಚಿಸಿ, "ಕಬ್ಬಿಣವನ್ನೆಲ್ಲಾ ಇಟ್ಟಿದ್ದ ಕಡೆಯೇ ಇಲಿ ತಿಂದು ಹೋಯಿತು. ಏನು ಮಾಡಲಿ!" ಎಂದನಂತೆ.

ಗಂಟು ಕಳೆದುಕೊಂಡ ಸ್ನೇಹಿತ ಕಲಹದಿಂದ ಪ್ರಯೋಗವಿಲ್ಲವೆಂದು ಸುಮ್ಮನಾದನು. ಉಪಾಯದಿಂದ ಕಾರ್ಯ ಸಾಧಿಸಬೇಕೆಂದು ಸಮಯ ಕಾಯುತ್ತಿದ್ದನು. ಇಬ್ಬರೂ ಸ್ನೇಹದಿಂದಲೆ ಇದ್ದರು.

ಹೀಗಿರುವಲ್ಲಿ ಎರಡನೆಯ ವರ್ತಕ ಹೊರದೇಶಕ್ಕೆ ಹೋಗಬೇಕಾಯಿತು. ಆಗ ತನ್ನ ಚಿಕ್ಕ ಮಗನನ್ನು ಸ್ನೇಹಿತನ ರಕ್ಷಣೆಯಲ್ಲಿ ಬಿಟ್ಟು ಹೋದನು. ಊರಿಗೆ ಬಂದ ಮೇಲೆ ಗೆಳೆಯನ ಬಳಿ ಹೋಗಿ, ತನ್ನ ಮಗನನ್ನು ಕಳಿಸಿ ಕೊಡುವಂತೆ ಕೇಳಿದನು. ಆಗ ಮೊದಲನೆಯಾತ, "ಹುಡುಗ ಬೀದಿಯಲ್ಲಿ ಆಡುತ್ತಿದ್ದಾಗ ಹದ್ದು ಎತ್ತಿಕೊಂಡು ಹೋಯಿತು. ನಾನೇನು ಮಾಡಲಿ!" ಎಂದು ಕೈಯಾಡಿಸಿಬಿಟ್ಟನು.

ಮಗನನ್ನು ಕಳೆದುಕೊಂಡ ತಂದೆ ರೇಗಿ ಕೂಗಾಡಿದನು. ವ್ಯವಹಾರವು ನ್ಯಾಯಾಸ್ಥಾನಕ್ಕೆ ಹೋಯಿತು.

"ಹುಡುಗನನ್ನು ಹದ್ದು ಎತ್ತಿಕೊಂಡು ಹೋಗುವುದೆಂದರೇನು? ಇದು ಎಂದೂ ನಡೆಯುವಂಥದಲ್ಲ. ಬರಿ ಮೋಸ" ಎಂದು ದೂರಿದನು. ಅವನ ಸ್ನೇಹಿತನು, "ಕಬ್ಬಿಣವನ್ನು ಇಲಿ ತಿನ್ನಬಹುದು; ಹುಡುಗನನ್ನು ಹದ್ದು ಎತ್ತಿಕೊಂಡು ಹೋಗಬಾರದೊ?" ಎಂದನು.

ವಿಚಾರಣೆ ಮಾಡಿದಾಗ ಮೋಸ ಬಯಲಿಗೆ ಬಂತು. ನ್ಯಾಯಾಧೀಶರು ಅವರವರ ವಸ್ತುವನ್ನು ಅವರವರಿಗೆ ಕೊಡಿಸಿದರು.*

೫ "ಕಾರ್ತವೀರ್ಯನನ್ನು ಕೊಂದ ಪರಶುರಾಮನಂತೆ" (ಪು. ೪೧)

ಇದೊಂದು ಪುರಾಣಕಥೆ. ಕಾರ್ತವೀರ್ಯನೆಂಬೊಬ್ಬ ರಾಜನಿದ್ದನು. ಅವನು ಮಹಾ ಪರಾಕ್ರಮಶಾಲಿ; ಎಲ್ಲ ರಾಜರನ್ನೂ ಗೆದ್ದು ಚಕ್ರವರ್ತಿಯಾದನು. ಅವನು ಬಹು ದುಷ್ಟ; ಪ್ರಜೆಗಳನ್ನು ಪೀಡಿಸುತ್ತಿದ್ದನು. ಜಮದಗ್ನಿ ಋಷಿ ಅವನ ಅನ್ಯಾಯವನ್ನು ಪ್ರತಿಭಟಿಸಿದರು. ಅದೇ ಮಹಾಪರಾಧವೆಂದು ಭಾವಿಸಿ ಕಾರ್ತವೀರ್ಯನು ಅವರನ್ನು ಕೊಂದು ಬಿಟ್ಟನು.

ರಾಮ ಜಮದಗ್ನಿ ಋಷಿಗಳ ಮಗ. ದುಷ್ಟ ಕ್ಷತ್ರಿಯರ ಈ ದಬ್ಬಾಳಿಕೆಯನ್ನು ಕಂಡು ಅವನಿಗೆ ರೇಗಿಹೋಯಿತು. ಆಶ್ರಮೋಚಿತವಾದ ಶಾಂತಿ ಮಾರ್ಗವನ್ನು ತೊರೆದು ಕ್ರಾಂತಿನಾಯಕನಾದನು. ಗಂಡು ಗೊಡಲಿಯನ್ನು ಹಿಡಿದು ಪರಶುರಾಮನಾದನು; ಮುನ್ನುಗ್ಗಿ ಕಾರ್ತವೀರ್ಯನನ್ನು ಕಡಿದು

* ಚೀನ ಒಂದು ಕಥಾಸಂಗ್ರಹದಲ್ಲಿ ಕಬ್ಬಿಣ ಎಂಬುದಕ್ಕೆ ಬದಲಾಗಿ ದ ಗಟ್ಟಿ" ಎಂದು ಹೇಳಿದೆ.

ಕೆಡವಿದನು. ಕ್ರಾಂತಿಯ ಕೆರಳಿನಲ್ಲಿ ಕ್ಷತ್ರಿಯರೆಲ್ಲರನ್ನೂ ಹುಡುಕಿ ಹುಡುಕಿ ಧ್ವಂಸಮಾಡತೊಡಗಿದನು.

ಪರಿಣಾಮ ಭಯಂಕರವಾಯಿತು. ರಾಜತ್ವ ವಹಿಸುವುದಕ್ಕೆ ಎಲ್ಲರೂ ಹೆದರಿದರು. ರಾಜ್ಯರಕ್ಷಣೆಯ ಕೆಲಸಕ್ಕೇ ಯಾರೂ ಇಲ್ಲವಾಯಿತು. ಆಗ ಋಷಿಗಳೆಲ್ಲ ಸೇರಿ ಉಪಾಯದಿಂದ ಪರಶುರಾಮನನ್ನು ತಪಸ್ಸಿಗೆ ಕಳಿಸಿದರು. ಆ ಮೇಲೆ ಕ್ಷತ್ರಿಯರು ರಾಜ್ಯಾಡಳಿತಕ್ಕೆ ಕೈಹಾಕಿದರು. ಕ್ರಾಂತಿಯ ಹೆದರಿಕೆಯಿಂದ ದುರಾಡಳಿತಕ್ಕೆ ಹೋಗದೆ ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದರು.

---

## ಜ್ಯೋತಿ ಗ್ರಂಥಮಾಲೆಯ ಮೊದಲನೆಯ

ತಿರುಕ್ಕುರಳ್ (ಧರ್ಮ ಭಾಗ)
ಪ್ರಸಿದ್ಧ ತಮಿಳು ನೀತಿ ಗ್ರಂಥದ ಹೊಸಗನ್ನಡ ಅ

## ಮುಂದಿನ ಪುಸ್ತಕಗಳು

ಅವ್ವೈಯಾರ ಕೃತಿಗಳು
ಟಾಲ್‌ಸ್ಟಾಯನ ಕಥೆಗಳು

## ಈ ಗ್ರಂಥಕರ್ತರ ಇತರ ಕೆಲವು ಪುಸ್ತಕಗಳು

ಭಾಸನ ಏಕಾಂಕ ನಾಟಕಗಳು
ಕನ್ನಡ ಸಾಹಿತ್ಯ ಚಿತ್ರಗಳು
ಸೊಹ್ರಾಬ್ ಮತ್ತು ರುಸ್ತುಮ್
ನಾಡ ಪದಗಳು (ಸಂಪಾದಿತ)

---

ಮಾರಾಟಕ್ಕೆ ಪ್ರತಿನಿಧಿಗಳು
ಡಿಪೋ